ಎಂಬ ನೀತಿವಚನದಂತೆ ಸಕಲ ಕಾರ್ಯಗಳೂ ಉದ್ಯೋಗ ದಿಂದಲೇ ಸಿದ್ಧಿಸುವುವು. ಮನಸ್ಸಿನಲ್ಲಿ ಮಂಡಿಗೆಯನ್ನು ಮಾಡಿಕೊಂಡರೆ ತಿನ್ನಲಿಕ್ಕೆ ಬಂದೀತೆ? ಎಂಬ ನಾಣ್ಣುಡಿಯಂತೆ ಕೇವಲ ಸಂಕಲ್ಪಗ ಳಿಂದಲೇ ಕಾರ್ಯಸಿದ್ಧಿಯಾಗಲಾರದು. ನಿದ್ರಿಸುತ್ತಿರುವ ಸಿಂಹದ ಬಾಯಿಯಲ್ಲಿ ಮೃಗಗಳು ತಾವಾಗಿಯೇ ಬಂದು ಬೀಳುವುದಿಲ್ಲ. ನಾವು ಮನೆಯಲ್ಲಿ ಕುಳಿತು ಆಯುರ್ವೇದದ ಉನ್ನತಿಯಾಗಬೇಕು. ಆಯುರ್ವೇದದ ಉನ್ನತಿಯಾಗಬೇಕೆಂದು ಬಡಬಡಿಸಿದರೇನಾದಹಾ ಗಾಯಿತು! ಯಾವಾಗ ರೋಗವು ಅಸಾಧ್ಯವೆಂದು ಕಾಣಿಸಿತೋ! ಆಗ ನಮ್ಮ ಕಣ್ಣುಗಳು ತೆರೆದುವು. ಅದರೆ ರೋಗವು ಬಹುಕಾಲ ದಿಂದಲೂ ಬೇರೂರಿಕೊಂಡಿರುವ ಕಾರಣ ಸುಲಭೋಪಾಯದಿಂದ ನಿವಾರಣೆಯಾಗುವ ಸಂಭವವಿಲ್ಲ. ಆದರೆ ಈಗೇನು ಮಾಡಬೇಕು? ಎಲ್ಲಿ ನೋಡಿದರೂ ಧರ್ಮದಆಸ್ಪತ್ರೆಗಳು ತೆರೆದಿವೆಮತ್ತುತೆರೆಯುತ್ತಿವೆ. ಚಿಕಿತ್ಸೆಯು ಉಚಿತವಾಗಿ ದೊರೆಯುತ್ತದೆ. ಔಷಧಿಗಳನ್ನು ಕುಟ್ಟುವ ಅರೆಯುವ ತೊಂದರೆಗಳು ತಪ್ಪಿದುವು. ಕಷಾಯವನ್ನು ಕುದಿಸುವ ಕಷ್ಟವೂ ಇಲ್ಲದಂತಾಯಿತು. ಈ ಸೂಜಿಯ ಯುಗದ ನವೀನ ಕಾಲ ದಲ್ಲಂತೂ ಪಥ್ಯಸೇವನೆಯ ಕಾಟವೇ ತಪ್ಪಿಹೋಯಿತು. ಈ ಕಾರಣ ಗಳಿಂದ ಜನಗಳು ಆ ಕಡೆಗೆ ಓಡುತ್ತಿರುವರು.

ಇತ್ತೀಚೆಗೆ ಅನೇಕ ರೋಗಗಳ ನಿವಾರಣೆಗಾಗಿ ಇಂಜಕ್ಷನ್ ಪರಿಪಾಟಿಯೊಂದು ಹೊಸದಾಗಿ ಬಂದು ದಿನೇ ದಿನೇ ಹಬ್ಬುತ್ತಿದೆ. ನಾಲಗೆಯ ರುಚಿಗೆ ವಶರಾಗಿರುವ ಜನಗಳು ಪಥ್ಯ ಸೇವನೆ ಮತ್ತು ಅಪಥ್ಯ ವರ್ಜನೆಯಲ್ಲಿ ಬಹು ಜುಗುಪ್ಸಿತರಾಗಿದ್ದುದರಿಂದ ಈ ಹೊಸ ಪದ್ಧತಿಗೆ ಆನಂದದಿಂದ ಸುಸ್ವಾಗತವನ್ನಿತ್ತರು ಮತ್ತು ಅನೇಕರು ಈ ಇಂಜಕ್ಷನ್ ಚಿಕಿತ್ಸೆಗೆ ತಮ್ಮ ಶರೀರವನ್ನೇ ಅರ್ಪಣಮಾಡಿಬಿಟ್ಟರು! ಈ ಕಾರಣಗಳಿಂದ ನಮ್ಮ ದೇಶದಲ್ಲಿ ಎಲೋಪೆಥಿ ಚಿಕಿತ್ಸಾ ಪದ್ಧತಿಯು ಸರ್ವ ವ್ಯಾಪಿಯಾಯಿತು, ಮತ್ತು ಆಯುರ್ವೇದ ಚಿಕಿತ್ಸೆಯು ಜನಗಳ ಅನಾದರಣೆಯನ್ನು ಹೊಂದಿ ಯಾವುದೋ ಒಂದು ಮೂಲೆಯಲ್ಲಿ ಸೇರಿಕೊಂಡಿತು. ಅಂತೂ ಇಂತೂ ಪ್ರಾಚೀನ ಕಾಲದಲ್ಲಿ ಸರ್ವಾದರ ಣೆಯನ್ನುಹೊಂದಿ ಮೆರೆಯುತ್ತಿದ್ದಆಯುರ್ವೇದ ಚಿಕಿತ್ಸೆಯ ವೈಭವವು

ಕಡೆಗೆ ಲೋಪಗೊಂಡಿತು. ಯಾವ ಭಾರತದೇಶವು ಹಿಂದಿನ ಕಾಲದಲ್ಲಿ ಸಕಲ ದೇಶೀಯರಿಗೆ ತನ್ನ ಅಪಾರ ಜ್ಞಾನಜ್ಯೋತಿಯನ್ನು ಹಂಚಿ ಅವರನ್ನು ಉನ್ನತಿಯ ಶಿಖರಕ್ಕೆ ಹತ್ತಿಸಿತೋ! ಅಂತಹ ದೇಶಕ್ಕೆ ಇಂತಹ ದುರ್ದಶೆಯು ಬಂದಿತು. ಯಾವ ಭಾರತ ದೇಶವು ಇತರರಿಗೆ ವಿವಿಧ ವಿಜ್ಞಾನದ ಭಿಕ್ಷೆಯನ್ನು ನೀಡಿ, ಪರಮೋದಾರಿಯೆಂಬ ಬಿರುದನ್ನು ಪಡೆದಿತ್ತೋ! ಅಂತಹ ನಮ್ಮ ದೇಶಕ್ಕೆ ಈಗ ಇತರರಲ್ಲಿ ಅದೇ ಜ್ಞಾನಭಿಕ್ಷೆಗೆ ಕೈಚಾಚುವ ಪ್ರಸಂಗವು ಬಂದೊದಗಿತು!

ದೈವಗತಿಯು ಒಂದೇ ವಿಧವಾಗಿರುವುದಿಲ್ಲ. ಪ್ರಪಂಚದ ಪ್ರತಿಯೊಂದು ವಸ್ತುವಿಗೂ ಕೆಲವು ಕಾಲ ಉನ್ನತಿ ಕೆಲವು ಕಾಲ ಅವನತಿಯುಂಟಾಗುವುದು ಸ್ವಾಭಾವಿಕವಾಗಿದೆ. ದೈವಾನುಕೂಲವಿರುವಾಗ ಒಬ್ಬನು ಭೂಮಂಡಲದ ಚಕ್ರೇಶ್ವರನಾಗಿ ಮೆರೆಯುತ್ತಾನೆ. ದೈವ ಪ್ರತಿಕೂಲವಾದಾಗ ಆ ಚಕ್ರೇಶ್ವರನೇ ಸಿಂಹಾಸನಚ್ಯುತನಾಗಿ ಬೀದಿ ಬೀದಿಯಲ್ಲಿ ಬಿಕ್ಕೆಯನ್ನು ಬೇಡುತ್ತ ಅಲೆಯುವಂತಾಗುತ್ತಾನೆ. ಪ್ರಕೃತಿಯ ನಿಯಮವೇ ಹೀಗಿರುತ್ತದೆ. ಈ ನಿಯಮವನ್ನನುಸರಿಸಿ ಹಿಂದೊಂದು ಕಾಲದಲ್ಲಿ ನಮ್ಮ ಅಷ್ಟಾಂಗಾಯುರ್ವೇದವು-ಸಂಪೂರ್ಣ ಪ್ರಪಂಚದಲ್ಲಿ ತನ್ನ ಪ್ರಭೆಯನ್ನು ಪಸರಿಸಿ ಏಕಮಾತ್ರ ಪ್ರಭುತ್ವವನ್ನು ಪಡೆದು, ಪರಮ ವೈಭವಶಾಲಿಯಾಗಿ ಮೆರೆಯುತ್ತಿದ್ದಿತು. ಇದ್ದಕ್ಕಿದ್ದ ಹಾಗೆಯೇ ದೈವಗತಿಯು ಪ್ರತಿಕೂಲವಾಗಲು ಜಗದ್ವ್ಯಾಪಿಯಾಗಿದ್ದ ಆಯುರ್ವೇದಕ್ಕೆ ಶೋಚನೀಯ ಪರಿಸ್ಥಿತಿಯುಂಟಾಯಿತು. ಹೀಗೆಯೇ ಅನಂತಕಾಲದವರೆಗೆ ಪ್ರಕೃತಿಯ ನಿಯಮಾನುಸಾರವಾಗಿ ಆಯುರ್ವೇದಕ್ಕೆ ಏರಿಳಿತಗಳುಂಟಾಗುತ್ತಿದ್ದುವು. ಆದರೆ ಪ್ರಾಚೀನಕಾಲದ ಗೌರವ ಪ್ರತಿಷ್ಠೆಗಳು ಮಾತ್ರ ಸಂಪೂರ್ಣ ಲೋಪಗೊಂಡವು.

ಲೋಕದಲ್ಲಿ ಯಾವುದೂ ಶಾಶ್ವತವಲ್ಲವೆಂಬುದು ದಿಟ! ಕಷ್ಟ ಸುಖಗಳು ಒಂದೇ ತೆರನಾಗಿರುವುದಿಲ್ಲ. ಸಮಯಾನುಸಾರವಾಗಿ ದೈವಲೀಲೆಯಿಂದ ಪರಿವರ್ತನೆಯುಂಟಾಗಿಯೇ ತೀರುತ್ತದೆ. ಇದನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ. ಎಷ್ಟೋ ಕಾಲದಿಂದ ಅಸ್ತಂಗತನಾಗಿದ್ದ ಆಯುರ್ವೇದದ ಭಾಗ್ಯಸೂರ್ಯನು ಈಗೀಗ ಉನ್ನತಿಯೆಂಬ ಉದಯಾಚಲದಲ್ಲಿ ತನ್ನ ಅರುಣ ಕಿರಣಗಳ ಪ್ರಭೆಯನ್ನು

ಬೀರುತ್ತ, ಆಯುರ್ವೇದ ಜಗತ್ತಿನಲ್ಲಿ ವ್ಯಾಪಕವಾಗಿದ್ದ ಕಗ್ಗತ್ತಲೆ ಯನ್ನು ನಿವಾರಿಸಲು ಸನ್ನದ್ಧನಾಗಿರುವಂತೆ ತೋರುತ್ತದೆ.

ಸುಮಾರು ಅರ್ಧ ಶತಮಾನದಿಂದ ಭಾರತೀಯಾಯುರ್ವೇದ ವೈದ್ಯಬಂಧುಗಳಲ್ಲಿ ಒಂದು ಹೊಸ ತರಹದ ಸ್ಫೂರ್ತಿಯುಂಟಾಗಲಾ ರಂಭವಾಗಿವೆ. ಪ್ರತಿಕ್ಷಣದಲ್ಲಿ ಆಯುರ್ವೇದಕ್ಕೆ ಒದಗುತ್ತಿರುವ ತಿರ ಸ್ಕಾರವನ್ನು ಸಹಿಸಲಾರದೆ ಉತ್ತರ ಭಾರತದ ಕೆಲವು ಸುಪ್ರತಿಷ್ಠಿತ ವೈದ್ಯವಿದ್ವನ್ಮಣಿಗಳು ಆಯುರ್ವೇದೋದ್ಧಾರಕ್ಕೆ ಬೇಕಾಗುವ ಸಲ ಕರಣೆಗಳನ್ನು ಕೂಡಿದ ಮಟ್ಟಿಗೆ ಸಿದ್ಧಪಡಿಸಿಕೊಂಡು, ಪ್ರಾಚೀನಾ ಯುರ್ವೇದೋನ್ನತಿಗೆ ಒದಗಬಹುದಾದ ಅನಂತ ವಿಘ್ನಗಳನ್ನು ದೂರಮಾಡಲು ಸನ್ನದ್ಧರಾಗಿ,ಮೊಟ್ಟಮೊದಲು ‹‹ಅಖಿಲಭಾರತಾಯು ರ್ವೇದೀಯ ವೈದ್ಯಸಮ್ಮೇಳನ''ವೆಂಬ ಮಹಾ ಸಭೆಯನ್ನು ಕೂಡಿಸಿ ದರು ಮತ್ತು ಅದರ ಮೂಲಕ ಆಲಸ್ಯ ನಿದ್ರೆಯಲ್ಲಿ ಸ್ವಸ್ವರೂಪವನ್ನೇ ಮರೆತಿದ್ದ ಭಾರತೀಯ ವೈದ್ಯರನ್ನು ಎಚ್ಚರಗೊಳಿಸಿದರು. ಅಂದಿನಿಂದ ಅಖಿಲಭಾರತೀಯ ಮತ್ತು ತತ್ತತ್ಪ್ರಾಂತೀಯ ವೈದ್ಯಸಮ್ಮೇಳನಗಳು ಎಷ್ಟೋ ನಡೆದುವು. ಆದರೂ ಪ್ರಚಾರ ಕಾರ್ಯಕ್ಕೆ ಅನುಕೂಲವಾದ ವಾತಾವರಣವು ದೊರೆಯಲಿಲ್ಲವಾದುದರಿಂದ ರಚನಾತ್ಮಕ ಕಾರ್ಯವು ಸಾಕಾದಷ್ಟು ನೆರವೇರಲಿಲ್ಲ. ಈಗ ಭಗತ್ಕೃಪೆಯಿಂದ ಆ ಅನುಕೂಲ ವಾತಾವರಣವು ಭಾರತ ದೇಶದಲ್ಲಿ ಸರ್ವತ್ರಬೀಸಲಾರಂಭಿಸಿದೆ. ಬ್ರಿಟಿಷ್ ಇಂಡಿಯಾದಲ್ಲಿ ಅಲ್ಲಿನ ಪ್ರಮುಖ ವೈದ್ಯರ ಮತ್ತು ಆಯುರ್ವೇದಾಭಿ ಮಾನಿಗಳಾದ ಪ್ರತಿಷ್ಠಿತ ಮಹಾಶಯರ ಸತತ ಪ್ರಯತ್ನದಿಂದ ಸರ್ಕಾ ರದವರು ಆಯುರ್ವೇದ ಚಿಕಿತ್ಸೆಗೆ ತಕ್ಕಮಟ್ಟಿಗೆ ಪ್ರೋತ್ಸಾಹವನ್ನು ಕೊಡುತ್ತಿದ್ದಾರೆ. ನಮ್ಮ ದೇಶೀಯ ಸಂಸ್ಥಾನಗಳಲ್ಲಿರುವ ವೈದ್ಯರ ಮತ್ತು ವೈದ್ಯಾಭಿಮಾನಿಗಳ ಪ್ರಯತ್ನ ವಿಶೇಷದಿಂದ ದೇಶೀಯ ಸರ್ಕಾ ರಗಳೂ ಈಗೀಗ ಹೆಚ್ಚು ಗಮನವನ್ನು ಕೊಡುತ್ತಿವೆ.

ಭಾರತದೇಶದ ದೇಶೀಯ ಸಂಸ್ಥಾನಗಳಿಗೆ ಮಾದರಿಯಾಗಿ ರುವ ನಮ್ಮ ಮೈಸೂರು ಸಂಸ್ಥಾನವಂತೂ ಬಹಳ ಮುಂದುವರಿದು ಆಯುರ್ವೇದ ಚಿಕಿತ್ಸೆಗೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟಿದೆ. ಮತ್ತು ಕೊಡುತ್ತಿದೆ. ನಮ್ಮ ಸಂಸ್ಥಾನದ ಘನಸರ್ಕಾರವು ಆಯುರ್ವೇದಕ್ಕೆ

ರಾಜಾಶ್ರಯವನ್ನು ಕೊಟ್ಟಿರುವುದು ಆಯುರ್ವೇದದ ಮಹಾ ಭಾಗ್ಯ ವೆಂದು ಹೇಳಬೇಕಾಗಿದೆ. ನಮ್ಮನ್ನಾಳಿದ ಧರ್ಮಪ್ರಭುಗಳಾದ ಶ್ರೀಮನ್ಮಹಾರಾಜ ಶ್ರೀಕೃಷ್ಣರಾಜ ಒಡೆಯರ್, ಬಹದ್ದೂರರವರು ಆಯುರ್ವೇದದ ಮಹತ್ವವನ್ನು ಅರಿತವರಾಗಿದ್ದುದರಿಂದ ತಮ್ಮ ಕೃಪಾದೃಷ್ಟಿಯನ್ನು ಆಯುರ್ವೇದ ಚಿಕಿತ್ಸೆಯ ಮೇಲೆ ಪ್ರಸರಿಸಿ, ಮೈಸೂರು ರಾಜಧಾನಿಯಲ್ಲಿ ಆಯುರ್ವೇದಿಕ್ ಆಸ್ಪತ್ರೆಯನ್ನೂ, ಆಯುರ್ವೇದ ಕಾಲೇಜನ್ನೂ ಬಹಳಧನವ್ಯಯದಿಂದ ಪ್ರಾರಂಭಿಸಿದರು. ಸದ್ಯಃನಮ್ಮನ್ನಾಳುವ ಶ್ರೀಮನ್ಮಹಾರಾಜಾಧಿರಾಜ ಶ್ರೀಮಜ್ಜಯಚಾಮರಾಜೇಂದ್ರ ಮಹಾಪ್ರಭುವರ್ಯರು, ತಮ್ಮ ಪೂಜ್ಯತೀರ್ಥರೂಪರವರು ಆರಂಭಿಸಿದ ಮಹಾಕಾರ್ಯಕ್ಕೆ ತಮ್ಮ ಉದಾರ ದಿವ್ಯಚಿತ್ತದ ಬೆಂಬಲವನ್ನುದಯಪಾಲಿಸಿ, ಆಯುರ್ವೇದೋದ್ಧಾರ ಕಾರ್ಯವನ್ನು ದಿನದಿನಕ್ಕೆ ಅಭಿವೃದ್ಧಿಗೊಳಿಸುತ್ತಿರುವುದನ್ನು ನೋಡಿದರೆ-ನಮ್ಮ ಪ್ರಾಚೀನಾಯುರ್ವೇದವು ಬಹುಕಾಲದಿಂದ ಆಚರಿಸುತ್ತಿದ್ದ ಘೋರತಪಸ್ಸು ಈಗ ಫಲಿಸಿತೆಂದು ಧಾರಾಳವಾಗಿಹೇಳಬಹುದು. ಮತ್ತು ಆಯುರ್ವೇದ ಚಿಕಿತ್ಸೆಯ ಉನ್ನತಿಗಾಗಿ ನಮ್ಮ ಮಹಾಪ್ರಭುಗಳು ತೋರಿಸುತ್ತಿರುವ ಅನನ್ಯ ಸಾಧಾರಣವಾದ ಪ್ರೇಮವು ಇತರ ಸಂಸ್ಥಾನಾಧೀಶರುಗಳಿಗೆ ಆದರ್ಶ ರೂಪವಾಗಿದೆ ಯೆಂದು ದಿಟ್ಟತನದಿಂದ ಹೇಳಬಹುದು.

ದೈವಾನುಕೂಲವು ಒದಗಿದಾಗ ಎಲ್ಲವೂ ಸುಮುಖವಾಗುವುದಲ್ಲದೆ ಅನುಕೂಲ ಪರಂಪರೆಗಳೂ ತಡೆಬಡೆಯಿಲ್ಲದೆ ಬಂದೊದಗುತ್ತಿರುತ್ತವೆ. ಇಂತಹ ಸುಖಕರ ವಾತಾವರಣದ ಶುಭ ಸಮಯದಲ್ಲಿ ನಮ್ಮ ಸಂಸ್ಥಾನದ ಪ್ರಜೆಗಳ ಮತ್ತು ಆಯುರ್ವೇದ ವೈದ್ಯರ ಸೌಭಾಗ್ಯ ವಿಶೇಷದಿಂದ ನಮ್ಮ ಮಹಾ ಪ್ರಭುಗಳ ಘನ ಸರ್ಕಾರಕ್ಕೆ, ಆಯುರ್ವೇದ ವಿದ್ಯೆಯ ಅನನ್ಯ ಭಕ್ತರಾದ ಶ್ರೀಮಾನ್ ಎಚ್. ಬಿ. ಗುಂಡಪ್ಪಗೌಡರಂತಹ ಆರೋಗ್ಯವಿಭಾಗದ ಮಂತ್ರಿಗಳು ದೊರತಿರುವುದು ವಿಶೇಷ ಮಹತ್ವಪೂರ್ಣವಾಗಿದೆ. ಈ ನಮ್ಮ ಮಾನನೀಯ ಸಚಿವರು ಆಯುರ್ವೇದೋದ್ಧಾರಕ್ಕಾಗಿ ಅತ್ಯಂತ ಪರಿಶ್ರಮವನ್ನು ವಹಿಸುತ್ತ, ಈ ಚಿಕಿತ್ಸೆಯ ಪ್ರಚಾರಕ್ಕೆ ಆತ್ಯಾವಶ್ಯಕವಾಗುವ ಅನೇಕ ವಿಧ ಸಹಾಯ ಸಂಪತ್ತಿಗಳನ್ನು ಸರ್ಕಾರದಿಂದ ಒದಗಿಸುತ್ತಿರು ವಕಾರಣ ಆಯುರ್ವೇದೋದ್ಧಾರ ಕಾರ್ಯವು

ದಿಗ್ವಿಜಯಿಯಾಗುವುದರಲ್ಲಿ ಯಾವ ಸಂಶಯವೂ ಇಲ್ಲ ಮತ್ತು ಆಯುರ್ವೇದ ಚಿಕಿತ್ಸೆಯು ರಾಜ್ಯಾಂಗವಾಗಿರುವ ಇಂತಹ ಶುಭ ಸನ್ನಿವೇಶದಲ್ಲಿ ರಾಜ್ಯದ ಪ್ರಜಾವರ್ಗದಲ್ಲಿಯೂ ಆಯುರ್ವೇದಾಭಿಮಾನವು ತಲೆದೋರುತ್ತಿರುವುದು ಸುವರ್ಣಕ್ಕೆ ಸುಗಂಧವು ಬೆರತಂತಾಗಿದೆ. ನಮ್ಮ ನಾಡಿನ ಅನೇಕ ಶ್ರೀಮಂತರು ಆಯುರ್ವೇದೋದ್ಧಾರಕ್ಕಾಗಿ ಸಹಾಯವನ್ನು ಉದಾರಪೂರ್ವಕವಾಗಿ ಮಾಡುತ್ತಿರುವರು. ಮೊನ್ನೆ ತಾನೇ ಬೆಂಗಳೂರಿನ ಷೇರ್‌ಮಾರ್ಕೆಟ್ಟಿನ ಪ್ರಮುಖ ವ್ಯಾಪಾರಿಗಳಾದ, ಲಕ್ಕೂರು ಅಂಡ್ ಕಂಪನಿಯ ಮಾಲೀಕರಾದ ಶ್ರೀಮಾನ್ ಎಸ್.ಎಲ್. ವೆಂಕಾಜಿಯವರು ಆಯುರ್ವೇದ ಚಿಕಿತ್ಸಾಲಯದ ಸ್ಥಾಪನೆಗೆ ಉದಾರಪೂರ್ವಕವಾಗಿ ಒಂದು ಲಕ್ಷ (೧೦೦೦೦೦)ರೂಪಾಯಿಗಳನ್ನು ದಾನಮಾಡಿರುವುದು ಅತ್ಯಂತ ಶ್ಲಾಘನೀಯವಾಗಿರುವುದಲ್ಲದೆ ಇನ್ನಿತರ ಶ್ರೀಮಂತರಿಗೆ ಮಾರ್ಗದರ್ಶಕವೂ ಆಗಿರುತ್ತದೆ. ಮತ್ತು ಉತ್ತರ ಕರ್ನಾಟಕದ ವಿಜಾಪುರ ಜಿಲ್ಲೆಯ ನಿವಾಸಿಗಳಾದ ರಿಟೈರ್ಡ್ ಪೋಲೀಸ್ ಇನ್ಸ್‌ಪೆಕ್ಟರ್ ಶ್ರೀಮಾನ್ ಕಂಕಣವಾಡಿ ಬಸಪ್ಪನವರು ಐವತ್ತು ಸಾವಿರ (೫೦೦೦೦) ರೂಪಾಯಿಗಳನ್ನು ಆಯುರ್ವೇದೋದ್ಧಾರ ಕಾರ್ಯಕ್ಕಾಗಿ ದಾನ ಮಾಡಿರುತ್ತಾರೆ. ಈ ಮಹನೀಯರು ದೊಡ್ಡ ಶ್ರೀಮಂತರಲ್ಲ. ತಮಗೆ ಬರುತ್ತಿದ್ದ ತಿಂಗಳ ಸಂಬಳದಲ್ಲಿ ತಮ್ಮ ಪರಿವಾರಕ್ಕೆ ಅತ್ಯಾವಶ್ಯಕವಾಗುವಷ್ಟು ಹಣವನ್ನು ಮಾತ್ರ ಉಳಿಸಿಕೊಂಡು ಬಾಕಿ ಹಣವನ್ನು ಕೂಡಿಹಾಕುತ್ತ, ತಮ್ಮ ಅಧಿಕಾರದ ಅವಧಿಯಲ್ಲಿ ಮೇಲ್ಕಂಡ ಮೊಬಲಗನ್ನು ಸಂಗ್ರಹಿಸಿ ದಾನ ಮಾಡಿರುತ್ತಾರೆ. ಇವರ ಮಿತವ್ಯಯವು ಜಗತ್ತಿಗೆ ಆದರ್ಶಪ್ರಾಯವಾಗಿದೆ. ಇಂತಹ ಸಂಯಮಿಗಳಾದ ಉದಾರಾಧಿಕಾರಿಗಳು ಪ್ರಪಂಚದಲ್ಲಿ ಬಹಳ ಸ್ವಲ್ಪ ಜನರು ಇರಬಹುದು. ಇವರ ಸಹಾಯ ಧನವು ಬೆಳಗಾವಿಯಲ್ಲಿರುವ ಕರ್ನಾಕ ಆಯುರ್ವೇದ ಕಾಲೇಜಿನ ಸ್ಥಾಪನೆಗಾಗಿ ವಿನಿಯೋಗಿಸಲ್ಪಟ್ಟಿದೆಯೆಂದು ತಿಳಿದು ಬಂದಿದೆ. ಆಯಾಯ ಪ್ರಾಂತದಲ್ಲಿರುವ ಇಂತಹ ಉದಾರಿಗಳು ಆಯುರ್ವೇದೋದ್ಧಾರಕ್ಕೆ ಉದಾರಸೇವೆಯನ್ನು ಸಲ್ಲಿಸುತ್ತಿರುವುದು ವಿಶೇಷಾನಂದದಾಯಕವಾಗಿದೆ.

ಈಶ್ವರನ ಪ್ರೇರಣೆಯಿಂದ ಅನೇಕ ಸಹಾಯಗಳು ಆಯುರ್ವೇದದ ಉನ್ನತಿಗೆ ಒದಗುತ್ತಿರುವ ಇಂತಹ ಸುಸಮಯದಲ್ಲಿ

ನಮ್ಮ ಭರತಖಂಡದ ಮತ್ತು ಆರ್ಯಾಯ ಪ್ರಾಂತದ ವೈದ್ಯ ವಿದ್ವಾಂಸರು ಜಾಗ್ರತರಾಗಿ, ಪರಸ್ಪರ ಸಹಯೋಗದಿಂದ, ನಮ್ಮ ಆಯುರ್ವೇದ ಚಿಕಿತ್ಸೆಯನ್ನು ಹಿಂದಿನಕಾಲದಂತೆ ಜಗದ್ವ್ಯಾಪಿಯನ್ನಾಗಿ ಮಾಡಲು, ಸರ್ವರೀತಿಯಿಂದಲೂ ಪ್ರಯತ್ನಿಸಬೇಕಾದುದು ಮುಖ್ಯವಾಗಿದೆ. ನಾವು ಕಳೆದುಕೊಂಡಿದ್ದ ಗೌರವ ಪ್ರತಿಷ್ಠೆಗಳು ದೈವಯೋಗದಿಂದ ಪುನಃ ನಮಗೆ ಸಂಭವಿಸುವ ಶುಭ ಸೂಚನೆಗಳು ತೋರುತ್ತಿರುವಾಗ, ನಮ್ಮ ವೈದ್ಯ ಬಂಧುಗಳು ಸಂಘೀಭೂತರಾಗಿ ಪಾರಸ್ಪರಿಕ ಮತಭೇದಗಳನ್ನು ಮತ್ತು ವೈಯಕ್ತಿಕ ದ್ವೇಷಾಸೂಯೆಗಳನ್ನು ಬಿಟ್ಟು ಆಯುರ್ವೇದದ ಸೇವೆಗೆ ಸನ್ನದ್ಧರಾಗಬೇಕು. "ನಹಿ ಸರ್ವಃ ಸರ್ವಂ ಜಾನಾತಿ" ಎಂಬ ಮಹೋನ್ನತವಾದ ಸದ್ಭಾವವು ಪ್ರತಿಯೊಬ್ಬ ವೈದ್ಯನ ಮನಸ್ಸಿನಲ್ಲಿ ಸ್ಥಿರಗೊಳ್ಳಬೇಕು. ಪ್ರಾಣಾಚಾರ್ಯರೆಂಬ ಮಹೋನ್ನತ ನಾಮಧೇಯದಿಂದ ಭೂಷಿತರಾಗಿರುವ ನಮ್ಮ ವೈದ್ಯರು, ಪ್ರಾಣಿಗಳ ಪ್ರಾಣರಕ್ಷಣೆಗೋಸುಗ ತಮ್ಮ ಪ್ರಾಣವನ್ನಾದರೂ ಅರ್ಪಿಸಲು ಸಿದ್ಧರಾಗುತ್ತಿದ್ದ ನಮ್ಮ ಪ್ರಾಚೀನ ಪ್ರಾಣಾಚಾರ್ಯ ಮಹಾನುಭವರ ಉದ್ದೇಶಗಳನ್ನುಮತ್ತು ಗೌರವ ಪ್ರತಿಷ್ಠೆಗಳನ್ನು ರಕ್ಷಿಸಬೇಕು. ಅವರು ಅನುಸರಿಸುತ್ತಿದ್ದ ಲೋಕೋಪಕಾರಕವಾದ ಉದಾತ್ತ ಭಾವವನ್ನು ಆದಷ್ಟುಮಟ್ಟಿಗೆ ಅನುಸರಿಸಬೇಕು. ಇಲ್ಲವಾದರೆ ನಾವು ಪ್ರಾಣಾಚಾರ್ಯರೆಂದೆನಿಸಿಕೊಳ್ಳಲು ಹಿಂಜರಿಯಬೇಕಾಗುತ್ತದೆ. ಆಧುನಿಕ ಬಾಹ್ಯಾಡಂಬರಗಳಿಗೆ ಮನಸೋತು ಸ್ವಾರ್ಥಪರರಾಗಿ ನಮ್ಮ ಹಿರಿಯರ ಕೀರ್ತಿಗೆ ಕಳಂಕವನ್ನು ತರುವಂತಹ ಕಾರ್ಯಗಳನ್ನು ಮಾಡಬಾರದು. ಆ ನಮ್ಮ ಮಹಾಪುರುಷರ ಧ್ಯೇಯವು ನಿಸ್ಸ್ವಾರ್ಥಪೂರಿತವಾದ ಲೋಕೋಪಕಾರವೇ ಆಗಿದ್ದಿತಲ್ಲದೆ ಸ್ವಾರ್ಥಪೂರಿತವಾಗಿರಲಿಲ್ಲ. ಆ ಮಹಾನುಭಾವರ ನಿಸ್ಸ್ವಾರ್ಥತೆಯ ಬಲದಿಂದಲೇ ಹಿಂದಿನ ಕಾಲದಲ್ಲಿ ನಮ್ಮ ಆಯುರ್ವೇದ ವೈಭವವು ಪ್ರಪಂಚದಲ್ಲೆಲ್ಲಾ ಬೆಳಗುತ್ತಿದ್ದಿತು. ಸ್ವಾರ್ಥವನ್ನು ಪೂರ್ತಿಯಾಗಿ ಯಾರೂ ಬಿಟ್ಟಿಲ್ಲ! ಆದರೆ ಪರಾರ್ಥಕ್ಕೆ ಹಾನಿಬರದಂತಹ ಸ್ವಾರ್ಥವು ಒಂದು ಪರಿಮಿತಿಯಲ್ಲಿದ್ದರೆ, ಅದು ಅಷ್ಟೊಂದು ಹಾನಿಕರವಾಗಲಾರದು. ನಮ್ಮ ವೈದ್ಯ ಬಂಧುಗಳು ಈ ತತ್ವವನ್ನು ಮನಸ್ಸಿನಲ್ಲಿಟ್ಟು ನಡೆಯುವುದಾದರೆ ಆಯುರ್ವೇದದ ಪ್ರಭಾವವು

ಸಂಪೂರ್ಣ ಜಗತ್ತನ್ನು ವಶಪಡಿಸಿಕೊಳ್ಳುತ್ತದೆ. ಆಗ ನಮ್ಮ ಚಿಕಿತ್ಸೆಯ ಕಡೆಗೆ ಜಗತ್ತು ತಾನಾಗಿಯೇ ತಲೆಬಾಗಿಸುತ್ತದೆ.

ನಾವು ಮೊದಲು ನಮ್ಮ ಚಿಕಿತ್ಸೆಯ ಸರ್ವೋಪಯೋಗಿತೆಯನ್ನು ಅತಿ ಸುಲಭವಾದ ಮಾರ್ಗದಿಂದ ಜನಗಳಿಗೆ ತೋರಿಸಬೇಕು. ನಮ್ಮ ದೇಶವು ವನಸ್ಪತಿಗಳ ಭಂಡಾರವಾದ ದೇಶ! ನಮ್ಮ ದೇಶವು ಕೃಷಿಪ್ರಧಾನವಾದ ಬಡದೇಶ! ಇಂತಹ ದೇಶವಾಸಿಗಳಿಗೆ ಸುಲಭಸಾಧ್ಯಗಳಾದ ವನಸ್ಪತಿಗಳ ಸುಲಭ ಚಿಕಿತ್ಸೆಯೇ ಅತ್ಯುಪಯುಕ್ತವಾದುದಾಗಿದೆ. ಯಾವ ದೇಶದಲ್ಲಿ ಯಾವನು ಹುಟ್ಟುತ್ತಾನೆಯೋ ಅವನಿಗೆ ಅದೇ ದೇಶ ಅದೇ ಭೂಮಿಯಲ್ಲಿ ಬೆಳೆಯುವ ವನಸ್ಪತಿಗಳೇ ಅತ್ಯಂತ ಹಿತಕಾರಿಗಳೆಂಬುದು ಆಯುರ್ವೇದ ಶಾಸ್ತ್ರದ ಸಿದ್ಧಾಂತವಾಗಿರುತ್ತದೆ. ಈ ಸಿದ್ಧಾಂತವು ವೈದ್ಯ ವಿದ್ವಾಂಸರಿಗೆ ಗೊತ್ತೇ ಇದೆ. ಮತ್ತು ಹಳ್ಳಿಯ ಬಡಜನರು ಈಗಿನ ಪೇಟೆಂಟ್ ಔಷಧಿಗಳಿಗೂ ಇತರ ಸಿದ್ಧೌಷಧಿಗಳಿಗೂ ಹಣವನ್ನು ತೆರುವಷ್ಟು ಶ್ರೀಸಂಪನ್ನರಾಗಿಲ್ಲವೆಂಬ ವಿಷಯವಂತೂ ಸರ್ವಾನುಭವಸಿದ್ಧವಾಗಿದೆ. ನಮ್ಮ ದೇಶದ ಬಹುಭಾಗದ ಜನರು ವನಸ್ಪತಿಗಳ ಗಣಿಗಳಲ್ಲಿಯೇ ಯಾವಾಗಲೂ ವಾಸಮಾಡುತ್ತಾರೆ. ಅವರು ತಮ್ಮಲ್ಲಿಯೇ ಸಿಗುವಂತಹ ಸುಲಭ ಮೂಲಿಕೆಗಳ ಸಹಾಯದಿಂದಲೇ ತಮ್ಮ ಪ್ರಾಥಮಿಕ ಚಿಕಿತ್ಸೆಯನ್ನು ತಾವೇ ಮಾಡಿಕೊಂಡು, ದುಡ್ಡನ್ನು ಉಳಿಸಿಕೊಳ್ಳುವಂತಹ ಉಪಾಯಗಳನ್ನು ನಮ್ಮ ವೈದ್ಯರು ಪ್ರಚಾರ ಮಾಡಬೇಕು. ಆಯುರ್ವೇದ ಚಿಕಿತ್ಸೆಯ ಉನ್ನತಿಗೆ ಈ ಕಾರ್ಯಕ್ರಮವು ಅತ್ಯಂತ ಸಹಾಯಕವಾಗಿರುತ್ತದೆ.

ಆಯುರ್ವೇದ ಶಾಸ್ತ್ರದಲ್ಲಿ ಇಂತಹ ಸುಲಭ ಚಿಕಿತ್ಸೆಗಳು ಸಾವಿರಾರು ತುಂಬಿವೆ. ಅವುಗಳನ್ನುಲೋಕೋಪಕಾರಕ್ಕಾಗಿ ಪ್ರಚಾರಮಾಡಬೇಕು. ಆ ಸುಲಭ ಚಿಕಿತ್ಸೆಗಳನ್ನೇ ತಾವು ಉಪಯೋಗಿಸಿ, ಪರೀಕ್ಷಿಸಿ, ತಮ್ಮ ತಮ್ಮ ಅನುಭವವನ್ನು ಗ್ರಂಥಗಳ ಮೂಲಕ ಮತ್ತು ವಾರ್ತಾಪತ್ರಗಳ ಮೂಲಕ ದೇಶದಲ್ಲೆಲ್ಲಾ ಹಬ್ಬಿಸಬೇಕು. ವೈದ್ಯರು ಗುಟ್ಟು ಬಿಡಬಾರದೆಂಬ ಸ್ವಾರ್ಥ ನೀತಿಯನ್ನು ಮೊದಲು ಬಿಡಬೇಕು. ನಮ್ಮ

ದೇಶದ ಜನಗಳಾದರೂ ಅತ್ಯುಪಯುಕ್ತಗಳಾದ ಇಂತಹ ಗ್ರಂಥಗಳನ್ನು ಸ್ವಾಗತಿಸಿ ತಮ್ಮ ತಮ್ಮ ಕುಟುಂಬದ ಪ್ರಾಥಮಿಕ ಚಿಕಿತ್ಸೆಗಾಗಿ ಸ್ವಾವಲಂಬನವನ್ನೇ ಹೊಂದಲು ಯತ್ನಿಸಬೇಕು. ತಮ್ಮಿಂದಾಗತಕ್ಕ ಸುಲಭ ಚಿಕಿತ್ಸೆಗಾಗಿ ನೂರಾರು ರೂಪಾಯಿಗಳನ್ನು ಹಾಳುಮಾಡತಕ್ಕ ನೀತಿಯು ನಮ್ಮ ಬಡದೇಶಕ್ಕೆ ಸರಿಬರುವುದಿಲ್ಲ. ಗ್ರಂಥದಲ್ಲಿ ಬರೆದಿರುವ ಸಾಮಾನ್ಯ ಮೂಲಿಕೆಯಿಂದೇನಾಗುತ್ತದೆಂಬ ಉದಾಸೀನ ನೀತಿಯನ್ನು ಜನಗಳು ಮೊದಲು ಬಿಡಬೇಕು. ಗ್ರಂಥದಲ್ಲಿ ಬರೆದಿರುವ ಸಾಮಾನ್ಯ ಮೂಲಿಕೆಗಳ ಆಧಾರದಿಂದಲೇ ಅಲ್ಲವೆ? ವಿದೇಶೀಯರು ಇಂದು ಧನ ಕುಬೇರರಾಗಿರುವುದು ? ಗ್ರಂಥದಲ್ಲಿ ಬರೆದಿರುವ ಮೂಲಿಕೆಯನ್ನೇ ತಂದು ಅದಕ್ಕೆ ಬೇರೆಯ ರೂಪವನ್ನು ಕೊಟ್ಟಾಗ ಮಾತ್ರ ತಮ್ಮ ಮೂಲಿಕೆಯನ್ನೇ ಒಂದಕ್ಕೆ ಹತ್ತು ಬೆಲೆಯನ್ನು ಕೊಟ್ಟು ಕೊಳ್ಳುತ್ತಾರೆ. ಈ ಗುಟ್ಟನ್ನು ಪ್ರತಿಯೊಬ್ಬರೂ ಅನುಸಂಧಾನ ಮಾಡಿದರೆ ಗೊತ್ತಾಗುತ್ತದೆ.

ಇಂತಹ ಅತ್ಯುಪಯುಕ್ತ ಗ್ರಂಥಗಳ ರಚನೆಯ ಮೂಲಕ ವನಸ್ಪತಿಗಳ ಸುಲಭ ಚಿಕಿತ್ಸೆಯನ್ನು ಪ್ರಚಾರಮಾಡಿ, ಆಯುರ್ವೇದೋದ್ಧಾರ ಕಾರ್ಯಕ್ಕೆ ನೆರವಾಗತಕ್ಕ ವೈದ್ಯರಿಗೆ ನಮ್ಮ ಘನ ಸರ್ಕಾರವು ಪ್ರೋತ್ಸಾಹವನ್ನು ಕೊಡದಿರಲಾರದು.

ಹೀಗೆ ಸರ್ಕಾರದ ಉದಾರ ಸಹಾಯ ಸಂಪತ್ತಿ, ವೈದ್ಯರ ಲೋಕೋಪಕಾರಕ ಜ್ಞಾನ ಸಂಪತ್ತಿ, ಜನ ಸಾಮಾನ್ಯದ ಸಹಾನುಭೂತಿ ಯುಕ್ತವಾದ ಸಹಯೋಗ ಸಂಪತ್ತಿ, ಈ ತ್ರಿವಿಧ ಸಂಪತ್ತಿಗಳು ಒಟ್ಟು ಗೂಡಿದರೆ-ನಮ್ಮ ಭಾರತೀಯರ ಪ್ರಾಣಾಧಾರವಾಗಿರುವ ಆಯುರ್ವೇದ ಚಿಕಿತ್ಸೆಯು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುತ್ತ, ಹಿಂದಿನ ಕಾಲದಂತೆ ಈಗ ಪುನಃ ತನ್ನ ಪ್ರಭುತ್ವವನ್ನು ಪ್ರಪಂಚದಲ್ಲಿ ಸ್ಥಾಪಿಸಿಕೊಂಡು, ನಮ್ಮ ಭಾರತ ದೇಶದ ಪ್ರಾಚೀನ ಗೌರವಕ್ಕೆ ಭೂಷಣವನ್ನು ತರುವಂತಹುದಾಗುತ್ತದೆ.

ಮೇಲೆ ಬರೆದಿರುವ ಮಹೋದ್ದೇಶಗಳ ಕಡೆಗೆ ವೈದ್ಯರ ಮತ್ತು ಜನಸಾಮಾನ್ಯದ ಮನಸ್ಸನ್ನು ಆದಷ್ಟು ಮಟ್ಟಿಗೆ ತಿರುಗಿಸಬೇಕೆಂಬ

ಅಭಿಪ್ರಾಯದಿಂದಲೇ ಈ ಗ್ರಂಥವು ಬರೆಯಲ್ಪಟ್ಟಿರುವುದಾಗಿದೆ. ನಾನು ಕಾಶಿಯಲ್ಲಿ ತರ್ಕಶಾಸ್ತ್ರ ಮತ್ತು ವೇದಾಂತ ಶಾಸ್ತ್ರವನ್ನು ಅಧ್ಯಯನ ಮಾಡುತ್ತಿರುವಾಗ ಆಯುರ್ವೇದಾಧ್ಯಯನದಲ್ಲಿ ಅಭಿರುಚಿಯುಂಟಾಯಿತು. ಆ ಅಭಿರುಚಿಯು ದಯಾಮಯನಾದ ಶ್ರೀ ವಿಶ್ವನಾಥನ ಕೃಪಾಬಲದಿಂದ ಹಾಗೂ ಹೀಗೂ ನೇರವೇರಿತು. ನನ್ನ ಕಾಶಿಯ ವಿದ್ಯಾಧ್ಯಯನ ಸಮಯದಲ್ಲಿ ಕಾಶೀ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲಾಧ್ಯಕ್ಷರಾದ ೧೦೮ ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯ ಮಹಾ ಸ್ವಾಮಿಗಳವರು ತಮ್ಮ ಘನತರವಾದ ಆಶ್ರಯವನ್ನು ದಯಪಾಲಿಸಿ ನನ್ನ ೧೪ ವರ್ಷಗಳ ದೀರ್ಘಕಾಲಾಧ್ಯಯನವು ನಿರಾತಂಕವಾಗಿ ನಡೆಯುವಂತೆ ಮಾಡಿದರು. ಇದಕ್ಕಾಗಿ ನನ್ನ ಕೃತಜ್ಞತಾ ಪುರಸ್ಸರಗಳಾದ ಅನಂತ ನಮಸ್ಕಾರಗಳನ್ನು ಅರ್ಪಿಸಬೇಕಾಗಿದೆ. ಮತ್ತು ಮೈಸೂರು ವೀರಶೈವ ವಿದ್ಯಾಭಿವೃದ್ಧಿಫಂಡ್ ಸಭೆಯವರು ಎರಡು ವರ್ಷಗಳ ವರೆಗೆ ಸ್ಕಾಲರ್ಷಿಪ್ಪನ್ನು ಸಹಾಯ ಮಾಡಿ ನನ್ನ ಕಾಶಿಯ ವಿದ್ಯಾಧ್ಯಯನವನ್ನು ಮುಂದುವರಿಸಿದುದಕ್ಕಾಗಿ ಮೇಲ್ಕಂಡ ಸಭೆಯವರಿಗೆ ಅನಂತ ಧನ್ಯವಾದಗಳನ್ನರ್ಪಿಸುತ್ತೇನೆ.

ನನ್ನ ವಿದ್ಯಾಧ್ಯಯನದ ಸಮಯದಲ್ಲಿ ಉತ್ತರ ಭಾರತದ ಅನೇಕ ಸುಪ್ರತಿಷ್ಠಿತ ವೈದ್ಯ ವಿದ್ವಾಂಸರ ಸಮಾಗಮವು ಮತ್ತು ಅವರ ಸದುಪದೇಶಗಳ ವಿಶೇಷ ಲಾಭವು ದೊರೆಯುತ್ತಿದ್ದುದರಿಂದ ನಾನು ಆರ್ಜಿಸಿದ ಅಲ್ಪ ಜ್ಞಾನಕ್ಕೆ ಸ್ವಲ್ಪ ಮಿರುಗುಂಟಾಯಿತು. ಅಂದಿನಿಂದಲೇ ಆಯುರ್ವೇದಜ್ಞಾನಪ್ರಸಾರದಲ್ಲಿ ವಿಶೇಷಾಸಕ್ತಿಯುಂಟಾಯಿತು. ಆ ನನ್ನ ಆಸಕ್ತಿಯು ಕಾರ್ಯರೂಪವಾಗಿ ಪರಿಣಮಿಸುವುದಕ್ಕೆ ತಕ್ಕಂತಹ ಸಹಾಯ ಸಂಪತ್ತಿಯು ದೊರೆಯದೆ ಇದ್ದುದರಿಂದ ಬಹುಕಾಲದ ವರೆಗೆ ಅದು ಅಂತರ್ಗತವಾಗಿಯೇ ಇದ್ದಿತು. ಈಗ ದೈವಯೋಗದಿಂದ ಆ ಸಹಾಯ ಸಂಪತ್ತಿಯು ದೊರೆಯಿತು. ಆದುದರಿಂದ ಆ ನನ್ನ ಆಸಕ್ತಿಯು ಬಹಿರ್ಗತವಾಗಿ ಈ ಗ್ರಂಥದ ರೂಪದಿಂದ ಪ್ರಕಾಶಗೊಂಡಿತು.

ಇದೇ ಬೆಂಗಳೂರಿನ ನಿವಾಸಿಗಳಾದ, ಊದಬತ್ತಿಯ ಕಾರ್ಖಾನೆಯ ಮೂಲಕ ನೂರಾರು ಬಡಜನಗಳಿಗೆ ಜೀವನ ವೃತ್ತಿಯನ್ನು ಕಲ್ಪಿಸಿ ಕೊಟ್ಟಿರುವ, ಶ್ರೀಮಾನ್ ಯಜಮಾನ್ ಕೆಂಚಪ್ಪ

ನವರು ಮತ್ತು ಇವರ ಸಹೋದರರು ಈ ಗ್ರಂಥದ ಮುದ್ರಣಾದಿ ಕಾರ್ಯಗಳಿಗೆ ಬೇಕಾಗುವ ಧನ ಸಹಾಯವನ್ನು ಉದಾರ ಪುರಸ್ಸರ ವಾಗಿ ಮಾಡಿ ಆಯುರ್ವೇದೀಯ ಚಿಕಿತ್ಸಾ ಗ್ರಂಥಗಳ ಪ್ರಚಾರ ಕಾರ್ಯಕ್ಕೆ ಬೆಂಬಲವನ್ನು ಕೊಟ್ಟಿರುತ್ತಾರೆ. ಈ ಉದಾರಿಗಳಾದ ಕೆಂಚಪ್ಪ ಸಹೋದರರು ತಮ್ಮ ಆದಾಯದ ಬಹುಭಾಗ ದ್ರವ್ಯವನ್ನು ಅನೇಕ ಧರ್ಮಕಾರ್ಯಗಳಿಗಾಗಿ ವಿನಿಯೋಗಿಸುತ್ತಿರುವುದು ವಿಶೇಷ ಶ್ಲಾಘನೀಯವಾಗಿರುತ್ತದೆ. ಇವರಿಗೆ ಜಗದೀಶ್ವರನು ಅನಂತ ಕಲ್ಯಾಣಗಳನ್ನು ದಯಪಾಲಿಸಲಿ.

ಈ ಗ್ರಂಥಕ್ಕೆ ಬೇಕಾಗುವಷ್ಟು ಕಾಗದವನ್ನು ಇಂತಹ ಕಾಗದದ ಮುಗ್ಗಟ್ಟಿನ ಸಮಯದಲ್ಲಿಯೂ ಒದಗಿಸಿಕೊಟ್ಟು ಈ ಗ್ರಂಥದ ಮುದ್ರಣ ಕಾರ್ಯವನ್ನು ಪೂರ್ತಿಗೊಳಿಸಿರುವ, ಮೈಸೂರು ಭದ್ರಾವತಿ ಮಿಲ್ಲಿನ ಮಾನನೀಯ ಚೇರಮೆನ್ನರುಗಳಿಗೂ, ಮಾನ ನೀಯ ಸೆಕ್ರೆಟೆರಿಯರಿಗೂ ನನ್ನ ಅನಂತ ಹಾರ್ದಿಕ ಧನ್ಯವಾದಗಳನ್ನು ಅರ್ಪಿಸಬೇಕಾಗಿದೆ.

ಈ ಗ್ರಂಥದಲ್ಲಿ-ಆಯುರ್ವೇದೀಯ ಸ್ವಸ್ಥವೃತ್ತದ ಜತೆಗೆ ನಾನು ಕಾಶಿಯ ಅಧ್ಯಯನ ಕಾಲದಲ್ಲಿ ಸಂಗ್ರಹಿಸಿದ ಕೆಲವು ವಿಷಯಗಳು ಸಾಧ್ಯವಿದ್ದಷ್ಟು ಸೇರಿಸಲ್ಪಟ್ಟಿವೆ. ಈ ಗ್ರಂಥವು ನಮ್ಮ ಪ್ರಾಚೀನಾ ಯುರ್ವೇದ.ಪದ್ಧತಿಯನ್ನನುಸರಿಸಿ ಬರೆಯಲ್ಪಟ್ಟಿರುವುದಾಗಿದೆ. ಇದು ನನ್ನ ಮೊಟ್ಟ ಮೊದಲನೆಯ ಕೃತಿಯಾಗಿರುವುದರಿಂದ ಇದರಲ್ಲಿ ಅನೇಕ ವಿಧ ಲೋಪ ದೋಷಗಳು ಇರುವುದು ಸ್ವಾಭಾವಿಕವಾಗಿದೆ.

ಆಯುರ್ವೇದದಲ್ಲಿ ಅಡಕವಾಗಿರುವ ಅನೇಕ ವಿಧ ಸುಲಭ ಚಿಕಿತ್ಸೆಗಳನ್ನು ಪ್ರಚಾರಮಾಡಬೇಕೆಂಬ ಉದ್ದೇಶದಿಂದ "ಆಯು ರ್ವೇದೀಯಗ್ರಂಥಮಾಲಾ" ಎಂಬ ಹೆಸರಿನ ಒಂದು ಗ್ರಂಥಮಾ ಲೆಯು ಆರಂಭಿಸಲ್ಪಟ್ಟಿದೆ. ಈ ಗ್ರಂಥವು ಆ ಮಾಲೆಯ ಪ್ರಥಮ ಪುಷ್ಪವಾಗಿದೆ. ಮುಂದೆ ಕಾಗದ ಮುಂತಾದ ಸಹಾಯವು ದೊರೆತ ಮೇಲೆ "ವನಸ್ಪತಿಗಳು-ಮಾದಕವಸ್ತುಗಳು-ಸುಲಭ ಚಿಕಿತ್ಸೆಗಳು- ಸಾಂಕ್ರಮಿಕ ರೋಗಗಳು, ರೋಗಿಯಸೇವೆ" ಎಂಬ ಹೆಸರಿನ ಗ್ರಂಥಗ ಳನ್ನು ಹೊರಡಿಸಲು ಯತ್ನಿಸುವುದಾಗುತ್ತದೆ. ಈ ಗ್ರಂಥವನ್ನು ಪ್ರಕಟಿಸುವ ಕಾಲದಲ್ಲಿ ಅನೇಕ ಗ್ರಂಥಗಳ ಪರಿಶೋಧನೆ, ಅವುಗಳ

ವಿಷಯಸಂಗ್ರಹ, ಮತ್ತು ಅವುಗಳನ್ನು ಬರೆಯುವುದು, ಇವೇ ಮೊದಲಾದ ಕೆಲಸಗಳ ಜತೆಗೆ ಪ್ರೂಫ್ ಸಂಶೋಧನೆಯ ಕೆಲಸವನ್ನೂ, ನಾನೊಬ್ಬನೇ ನಿರ್ವಹಿಸಬೇಕಾಗಿ ಬಂದಿತು. ಆದುದರಿಂದ ಈ ಗ್ರಂಥದಲ್ಲಿ ಅನೇಕ ಅಕ್ಷರ ದೋಷಗಳು ಕಂಡು ಬರಬಹುದು. ಅವುಗಳನ್ನು ಸಹೃದಯರೂ, ಗುಣೈಕಪಕ್ಷಪಾತಿಗಳೂ ಆದ ಮಾನನೀಯ ಪ್ರಿಯ ಪಾಠಕರು ಗಣಿಸದೆ ತಮ್ಮ ಸುಸಂಸ್ಕೃತವಾದ ಉದಾರಭಾವದಿಂದ ಈ ಗ್ರಂಥವನ್ನು, ಆಯುರ್ವೇದದ ಅಲ್ಪ ಸೇವೆಯನ್ನಾಗಿ ಭಾವಿಸಿ ಪುರಸ್ಕರಿಸದಿರಲಾರರೆಂದು ನಂಬಿರುತ್ತೇನೆ.

ಇತಿ ಶಿವಕುಮಾರಸ್ವಾಮಿ.

ಸ್ವಭಾನು ಸಂವತ್ಸರ ಜೇಷ್ಠ ಬಹುಳ
೧೩ ಬುಧವಾರ 30-6-1943.

ಮೃತ್ಯುಂಜಯೌಷಧಾಲಯ
ಕೋಟೆಗೆ ಲೇನ್ ಬೆಂಗಳೂರು ಸಿಟಿ.

ಶಿವಂ ಭೂಯಾತ್.



# 'ಆರೋಗ್ಯ ದರ್ಪಣ' ಗ್ರಂಥಕ್ಕೆ ಪಂಡಿತರ ಸಮ್ಮತಿಗಳು


ಭಿಷಕ್ಚೂಡಾಮಣಿ, ಆಯುರ್ವೇದ ವಿದ್ವಾನ್

**ಡಾಕ್ಟರ್ ವೈ. ಲಕ್ಷ್ಮೀನರಸಿಂಹಶಾಸ್ತ್ರೀ, ಎಲ್.ಎಂ.ಪಿ.,**

ರಿಟೈರ್ಡ್ ಸೂಪರಿಂಟೆಂಡೆಂಟ್, ಗೌ॥ ಆಯುರ್ವೇದಿಕ್ ಆಸ್ಪತ್ರೆ ಮತ್ತು ಫಾರ್ಮಸಿ, ಮೈಸೂರು ಗೌ॥ ಆಯುರ್ವೇದಿಕ್ ಯುನಾನಿ ಕಾಲೇಜಿನ ಭೂತಪೂರ್ವ ಪ್ರಿನ್ಸಿಪಾಲ್ ಮತ್ತು ನಿಖಿಲ ಕರ್ನಾಟಕ ಆಯುರ್ವೇದ ಮಂಡಲ ಮತ್ತು ಮೈಸೂರು ವೈದ್ಯಸಂಘ (ರಿಜಿಸ್ಟರ್ಡ್) ಇವುಗಳ ಮಾಜಿ ಅಧ್ಯಕ್ಷರು.

710, ರಾಮಾನುಜ ರೋಡ್, ಮೈಸೂರು.

ತಾ॥ 25-7-1943.


ಆಯುರ್ವೇದಾಚಾರ್ಯ ಪಂ॥ ಶ್ರೀ ಶಿವಕುಮಾರಸ್ವಾಮಿಗಳಿಂದ ರಚಿತವಾಗಿರುವ "ಆರೋಗ್ಯ ದರ್ಪಣ" ವೆಂಬ ಈ ಕನ್ನಡ ಗ್ರಂಥವನ್ನು ಪರಿಶೀಲಿಸಲು ತುಂಬಾ ಸಂತೋಷವಾಗುತ್ತದೆ. ಇದರ ಪೀಠಿಕೆಯಲ್ಲಿ ಆಯುರ್ವೇದದ ಉತ್ಪತ್ತಿ, ಅದರ ಗತ ಮತ್ತು ವರ್ತಮಾನ ಸ್ಥಿತಿಗತಿಗಳು, ಕಾಲಾನುಸಾರವಾಗಿ ಒದಗಿದ ಏರಿಳಿತಗಳು ನಾನಾ ಗ್ರಂಥಕರ್ತರು, ಅವರುಗಳ ಕಾಲ ಮತ್ತು ಅವರ ಗ್ರಂಥಗಳ ವೈಶಿಷ್ಟ್ಯ, ಈ ವಿಷಯುಗಳಲ್ಲಿ ನಿಷ್ಪಕ್ಷಪಾತಿಗಳಾದ ಅನೇಕ ವಿದೇಶೀಯ ಪಂಡಿತರುಗಳ ವಿಮರ್ಶಾತ್ಮಕ ಅಭಿಪ್ರಾಯಗಳು, ಇತ್ಯಾದ್ಯನೇಕ ಉಪಯುಕ್ತ ಮತ್ತು ಅಪೂರ್ವಗಳಾದ ವಿಚಾರಗಳು ಅನೇಕ ಗ್ರಂಥಗಳ ಪರಿಶೋಧನೆಯಿಂದ ಸಯುಕ್ತಿಕವಾಗಿ ವಿವರಿಸಲ್ಪಟ್ಟಿರುವುದರಿಂದ, ಜನಸಾಮಾನ್ಯಕ್ಕೆ ಆಯುರ್ವೇದದ ಇತಿಹಾಸವು ಸ್ಪಷ್ಟಪಟ್ಟಂತಾಗುವುದು ಈ ಗ್ರಂಥದ ಒಂದು ಮಹತ್ಪ್ರಯೋಜನವಾಗಿದೆ.

ಇನ್ನು ಗ್ರಂಥಸ್ಥ ವಿಚಾರಗಳನ್ನು ತೆಗೆದುಕೊಂಡರೆ—ಇದರಲ್ಲಿ ಅನುಸರಿಸಿರುವ ಸರಣಿಯು ವೃದ್ಧಾಚಾರಕ್ಕೂ ಆರ್ಷಗ್ರಂಥಪರಿಪಾಠಕ್ಕೂ ಲೋಪಬಾರದಂತೆ ಸುಸಂಗತವಾಗಿದೆ ಮತ್ತು ತಕ್ಕ ಶಾಸ್ತ್ರಾಧಾರಗಳೊಡನೆ ಆಧುನಿಕವಾಗಿ ನೂತನ ಶೈಲಿಯಲ್ಲಿ ಬರೆಯಲ್ಪಟ್ಟಿರುವ ನಮ್ಮ ನಿತ್ಯೋಪಯೋಗದಲ್ಲಿರಬಹುದಾದ ದಿನಚರ್ಯೆ, ಆಹಾರ

ವಿಹಾರಗಳು ಮತ್ತು ಅವುಗಳ ಅನುಕರಣಕ್ಕೆ ಅನುಕೂಲವಾದ ಸುಲಭ ಚಿಕಿತ್ಸೆಗಳು, ಇವುಗಳೆಲ್ಲವೂ ಪ್ರತಿಯೊಬ್ಬ ಗೃಹಸ್ಥನಿಗೂ ತನ್ನ ನಿತ್ಯಕ್ರಮಗಳಲ್ಲಿ ಎಚ್ಚರಿಕೆಯಿಂದ ಹೆಜ್ಜೆಯನ್ನಿಡಲು ತುಂಬಾ ಸಹಕಾರಿಯಾಗಿರುತ್ತವೆ.

ಇದಲ್ಲದೆ ಇಂತಹ ಸುಲಭಶೈಲಿಯ ವೈದ್ಯಕೀಯ ವಿಷಯಕ ಗ್ರಂಥಗಳನ್ನು ಇತರ ಭಾಷೆಯಲ್ಲಿರುವಂತೆಯೇ ಕನ್ನಡದಲ್ಲಿಯೂ ವೃದ್ಧಿಗೊಳಿಸಲು ಸಂಕಲ್ಪಿಸಿ ಮುಂದಡಿಯಿಟ್ಟಿರುವ ಈ ಗ್ರಂಥಕರ್ತರು ಕನ್ನಡಾಭಿಮಾನಿಗಳೆಲ್ಲರ ಕೃತಜ್ಞತೆಗೂ ಅರ್ಹರೇ ಸರಿ.

ಇಂತಹ ಶಾಸ್ತ್ರಸೇವೆ ಮತ್ತು ಭಾಷಾಸೇವೆಯು ಉದ್ಯಮಕ್ಕೆ ವೈದ್ಯಸಹೋದರರಿಂದಲೂ, ಪ್ರಜಾಕೋಟಿಯಿಂದಲೂ, ರಾಜಾನುಗ್ರಹದ ಮೂಲಕವೂ, ಅಗತ್ಯವಾದಷ್ಟು ಪುರಸ್ಕಾರವು ಭಗವದನುಗ್ರಹದಿಂದ ದೊರಕಲೆಂಬುದೇ ನನ್ನ ಮನಃಪೂರ್ವಕವಾದ ಹಾರೈಕೆ.

ಇತಿ

ವೈ. ಲಕ್ಷ್ಮೀನರಸಿಂಹಶಾಸ್ತ್ರೀ.



Dated, the 28th July, 1943.

**M. RAMACHANDRAN,** Esq., M. B. B. S., F. I. M.,
PRINCIPAL, Govt. Ayurvedic and Unani College & Hospitals, MYSORE.

I have perused with pleasure the publication entitled "Arogya Darpana" written in Kannada by Ayurvedacharya Pandit Sri Sivakumara Swamigalu of Bangalore City. It is intended to serve as a guide for understanding the common and simple rules of hygienic living and to promote the spread of such knowledge in the Kannada country through the medium of the vernacular. The author deserves our gratitude for making such a contribution to Ayurveda.

The book opens with a historical introduction in which the origin, progress and decline of Ayurveda are briefly considered and then passes on to a description of the Ways and Laws of Health supported by quotations from standard Ayurvedic Works and the Upanishads, etc. The Bulk of the book is devoted to a consideration of the nutritional and medicinal properties of the dietetic articles that are in common and daily use in our country. Simple and useful prescriptions are given for ordinary ailments under each of these articles.

I would earnestly plead for the revival of the Sadachara contained in the Ayurvedic texts and the daily rules of conduct enjoined by Sanathana Dharma. With this end in view I heartily commend this useful publication.

M. Ramachandran.



ಆಯುರ್ವೇದ ವಿದ್ವಾನ್ ವೈದ್ಯಮಣಿ
**ಪಂಡಿತ ಗೋಪಾಲಕೃಷ್ಣಾವಧಾನೀ** — 764, ಭಕ್ಷಿ ಬಸಪ್ಪಾಜಿ ಗಾರ್ಡನ್,
ಶ್ರೀ ಗಣೇಶ ಆಯುರ್ವೇದ ವೈದ್ಯಶಾಲಾ — ಮೈಸೂರು.
ಆನರರಿ ಸೆಕ್ರಟರಿ, ಆಯುರ್ವೇದ ವೈದ್ಯಸಂಘ — ತಾ॥ 26-7-1943.

ವೈದ್ಯರಿಗೂ ವೈದ್ಯಾಭಿಮಾನಿಗಳಾದ ಜನಗಳಿಗೂ ಉಪಯೋಗವಾಗುವಂತೆ ಪೂರ್ವಾಚಾರ್ಯರುಗಳಾದ ಮಹರ್ಷಿಗಳಿಂದ ಪ್ರಣೀತಗಳಾದ ಅನೇಕ ಗ್ರಂಥಗಳ ಆಧಾರದಿಂದ ಕರ್ಣಾಟಕ ಭಾಷೆಯಲ್ಲಿ ಸುಲಭ ಶೈಲಿಯಲ್ಲಿ ಮುದ್ರಿತವಾಗಿರುವ ಆಯುರ್ವೇದೀಯ ಗ್ರಂಥಮಾಲೆಯ ೧ನೆಯ ಪುಷ್ಪವಾದ ಈ "ಆರೋಗ್ಯ ದರ್ಪಣ" ವೆಂಬ ಗ್ರಂಥವು ಗೃಹೋಪಯುಕ್ತಪದಾರ್ಥಗಳಿಂದ ಸುಲಭ ಚಿಕಿತ್ಸೆಗೆ ಅತ್ಯುತ್ತಮ ವೆಂಬುದರಲ್ಲಿ ಸಂಶಯವಿಲ್ಲ.

ಈ ಗ್ರಂಥಕರ್ತರಾದ ಆಯುರ್ವೇದಾಚಾರ್ಯ, ವೈದ್ಯಮಾರ್ತಂಡ, ಭಿಷಗ್ರತ್ನ, ಸಾಹಿತ್ಯವಾರಿಧಿ, ಇತ್ಯಾದಿ ಬಿರುದಾಂಕಿತರಾದ ಪಂಡಿತ ಶ್ರೀ ಶಿವಕುಮಾರಸ್ವಾಮಿಗಳವರ ಪ್ರಯತ್ನವು ಸ್ತುತ್ಯವಾದುದು. ಈ ಪುಸ್ತಕದಲ್ಲಿ ಉಲ್ಲೇಖಿಸಿರುವ ವಿಷಯಗಳು ಪ್ರತಿಯೊಬ್ಬ ಮಾನವನಿಗೂ ಮುಖ್ಯವಾಗಿ ತಿಳಿದಿರಬೇಕಾಗಿರುವುದರಿಂದ ಮಹಾರಾಜಾಧಿರಾಜರುಗಳೇ ಆದಿಯಾಗಿ ಸಾಮಾನ್ಯ ಜನಗಳೆಲ್ಲರೂ ಇದನ್ನು ಪಠನಮಾಡಿ, ಇದರಲ್ಲಿ ಹೇಳಿರುವಂತೆ ಜನಗಳು ಆಹಾರವಿಹಾರಾದಿಗಳಲ್ಲಿ ಎಚ್ಚರಿಕೆಯಿಂದ ನಡೆವಲ್ಲಿ ಗ್ರಂಥ ಕರ್ತರ ಶ್ರಮವು ಸಾರ್ಥಕವಾಗುವುದು.

ಈ ಗ್ರಂಥಕ್ಕೆ ಸರ್ಕಾರದವರಿಂದಲೂ, ಮಹಾರಾಜರುಗಳಿಂದಲೂ ಮತ್ತು ಇತರ ಸಾರ್ವಜನಿಕರಿಂದಲೂ ಉತ್ತೇಜನವುಂಟಾಗಿ ಗ್ರಂಥಕರ್ತರ ಉದ್ದೇಶವು ಈಡೇರುವಂತೆ ಆಯುರ್ವೇದಾಭಿಮಾನಿ ಶ್ರೀ ಧನ್ವಂತರಿಯು ಅನುಗ್ರಹಿಸಲೆಂದು ಹಾರೈಸುತ್ತೇನೆ.

**ಪಂ. ಗೋಪಾಲಕೃಷ್ಣಾವಧಾನೀ.**



“ ಆಚಾರ್ಯಸೇವಾಧುರೀಣ ”

**ಡಾಕ್ಟರ್ ಟಿ. ಎಸ್. ಸಿದ್ದಪ್ಪ, ಎಲ್.ಎಂ. & ಎಸ್.,**

**ರಿಟೈರ್ಡ್ ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರ್, ಮೈಸೂರು.**

ಆಯುರ್ವೇದಾಚಾರ್ಯ ಪಂಡಿತ ಶ್ರೀ ಶಿವಕುಮಾರಸ್ವಾಮಿಗಳವರು ರಚಿಸಿರುವ ‘ಆರೋಗ್ಯ ದರ್ಪಣ’ವೆಂಬ ಗ್ರಂಥದಲ್ಲಿ ಅಡಕವಾಗಿರುವ ವಿಷಯಗಳನ್ನು ಓದಿ ಬಹಳ ಸಂತೋಷವಾಯಿತು. ಈ ಗ್ರಂಥವು ಕನ್ನಡನಾಡಿನ ಜನಗಳಿಗೆ ಸುಲಭವಾಗಿ ತಿಳಿಯುವಂತೆ ಬರೆಯಲ್ಪಟ್ಟಿದೆ ಮತ್ತು ನಮ್ಮ ದೇಶದಲ್ಲಿ ದೊರೆಯತಕ್ಕ ಧಾನ್ಯ, ತರಕಾರಿ, ಹಣ್ಣುಗಳು ಮುಂತಾದ ಪದಾರ್ಥಗಳಲ್ಲಿರುವ ಗುಣದೋಷಗಳೂ, ಅವುಗಳಿಂದುಂಟಾಗುವ ಸುಲಭ ಚಿಕಿತ್ಸೆಗಳೂ ವಿಸ್ತಾರವಾಗಿ ಬರೆಯಲ್ಪಟ್ಟಿವೆ. ಸಾಧಾರಣವಾದ ದೇಹಾಲಸ್ಯವುಂಟಾದಾಗ ವೈದ್ಯರ ಸಹಾಯವಿಲ್ಲದೆ ನಮಗೆ ದೊರಕುವ ಸಾಧಾರಣ ವಸ್ತುಗಳಿಂದಲೇ ನಮ್ಮ ಪ್ರಾಥಮಿಕ ಚಿಕಿತ್ಸೆಯನ್ನು ಮಾಡಿಕೊಳ್ಳಲು ಈ ಗ್ರಂಥವು ಬಹಳ ಸಹಾಯಕಾರಿಯಾಗಿರುತ್ತದೆ. ಇದರಲ್ಲಿರುವ ಕೆಲವು ಪ್ರಯೋಗಗಳು ಆಂಗ್ಲೇಯ ಚಿಕಿತ್ಸೆಯಲ್ಲಿಯೂ ಉಪಯೋಗಿಸಲ್ಪಡುತ್ತಲಿವೆ.

ಶ್ರೀ ಸ್ವಾಮಿಗಳವರು ಅನೇಕ ಗ್ರಂಥಗಳನ್ನು ಪರಿಶೋಧಿಸಿ ಪೀಠಿಕೆಯಲ್ಲಿ ಆಯುರ್ವೇದದ ಪ್ರಾಚೀನೇತಿಹಾಸವನ್ನೂ ಅದರ ಶ್ರೇಷ್ಠತೆಯನ್ನೂ ತೋರಿಸಿರುವದಲ್ಲದೆ ಇತರ ದೇಶೀಯರ ಅಭಿಪ್ರಾಯಗಳನ್ನೂ ಸಂಗ್ರಹಿಸಿ ಬರೆದಿರುತ್ತಾರೆ. ಗ್ರಂಥಕರ್ತರು ಬಹಳ ಪರಿಶ್ರಮದಿಂದ ವಿಷಯಸಂಗ್ರಹವನ್ನು ಮಾಡಿ ಈ ಪುಸ್ತಕವನ್ನು ರಚಿಸಿರುವುದರಿಂದ ರಾಜಾನುಗ್ರಹವೂ, ಪ್ರಜಾನುರಾಗವೂ ಇವರಿಗೆ ದೊರಕಬೇಕಾದುದು ಅಗತ್ಯವಾಗಿದೆ. ಅಲ್ಲದೆ ಈ ವಿಧವಾದ ಪ್ರೋತ್ಸಾಹವು ದೊರೆಯುವುದರಿಂದ ಇವರ ಮುಂದಿನ ಗ್ರಂಥಗಳಿಗೆ ಉತ್ತೇಜನವು ಲಭಿಸಿದಂತಾಗುತ್ತದೆ. ಗ್ರಂಥರಚನೆಯು ಬಹಳ ಪರಿಶ್ರಮಸಾಧ್ಯವೆಂಬುದು ನನ್ನ ಅನುಭವಕ್ಕೂ ಸ್ವಲ್ಪಮಟ್ಟಿಗೆ ಬಂದಿದೆ. ಜನೋಪಯೋಗಿಗಳಾದ ಇಂತಹ ಅನೇಕ ಗ್ರಂಥಗಳನ್ನು ಶ್ರೀ ಸ್ವಾಮಿಗಳು ರಚಿಸಿ ನಮ್ಮ ದೇಶದ ಜನಗಳಿಗೆ ವಿಶೇಷವಾದ ಉಪಕಾರವನ್ನುಂಟುಮಾಡುವರೆಂದು ಆಶಿಸುತ್ತೇನೆ.

27-7-1943. T. S. Siddappa.



ವೈ. ಚಂದ್ರಶೇಖರಶಾಸ್ತ್ರೀ, ಎಂ.ಎ.,
ಸಾಹಿತ್ಯ ವಿದ್ವಾನ್.
ರಿಟೈರ್ಡ್ ಪ್ರಿನ್ಸಿಪಾಲ್, ಸಂಸ್ಕೃತ ಕಾಲೇಜ್.

1064, ವಾಣೀವಿಲಾಸ ರೋಡ್,
ಮೈಸೂರು.
ತಾ॥ 25-7-1943.

ಆಯುರ್ವೇದಾಚಾರ್ಯ ಪಂ॥ ಶ್ರೀ ಶಿವಕುಮಾರಸ್ವಾಮಿಗಳು ರಚಿಸಿರುವ 'ಆರೋಗ್ಯ ದರ್ಪಣ'ವೆಂಬ ಅನ್ವರ್ಥನಾಮದ ಗ್ರಂಥವನ್ನು ಓದಿ ನೋಡಿರುತ್ತೇನೆ. ಇದು ಎಲ್ಲ ಜನರಿಗೂ ಪ್ರತಿನಿತ್ಯದಲ್ಲಿಯೂ ಉಪಯೋಗಕರವಾದ ಪುಸ್ತಕವಾಗಿದೆ. ಆರೋಗ್ಯವು ತಪ್ಪಿದಾಗ ಆಸ್ಪತ್ರೆಗೆ ಅಲೆಯುವ ಕಷ್ಟವಿಲ್ಲದೆ, ಡಾಕ್ಟರಿಗೆ ಹಣವನ್ನು ತೆರಬೇಕಾದ ಆವಶ್ಯಕತೆ ಇಲ್ಲದೆ, ಹೆಚ್ಚು ವೆಚ್ಚ ಶ್ರಮಗಳೂ ಇಲ್ಲದೆ, ಇದರಲ್ಲಿ ದೊರೆಯುವ ತಿಳಿವಳಿಕೆಯಿಂದ ತಕ್ಕ ರೀತಿಯಲ್ಲಿ ನಮ್ಮ ರೋಗಗಳನ್ನು ಸುಲಭವಾಗಿಯೂ, ಶೀಘ್ರವಾಗಿಯೂ ನಿವಾರಿಸಿಕೊಂಡು ಆರೋಗ್ಯಸುಖವನ್ನು ಪಡೆಯಲು ಇದು ನಿಜವಾಗಿಯೂ ವಿಶದವಾದ ತಿಳಿವಳಿಕೆಯನ್ನುಂಟುಮಾಡುವ ಕೈಗನ್ನಡಿಯಾಗಿದೆ. ಆರೋಗ್ಯದಲ್ಲಿರುವವರು ರೋಗಗಳು ಬಾರದಿರುವಂತೆ ಮುನ್ನೆಚ್ಚರಿಕೆಯ ಕಾರ್ಯಗಳನ್ನು ನೆರವೇರಿಸಿಕೊಳ್ಳಲು ತುಂಬಾ ಸೌಕರ್ಯವಿದೆ. ದಿನಗಟ್ಟಲೆಯಲ್ಲಿ ನಾವು ಉಪಯೋಗಿಸುವ ಆಹಾರ

ವಸ್ತುಗಳ ಗುಣವನ್ನು ತಿಳಿಯುವುದರಿಂದ "ಊಟಬಲ್ಲವಗೆ ರೋಗವಿಲ್ಲ"ವೆಂಬ ಗಾದೆಯಂತೆ ತಕ್ಕರೀತಿಯಲ್ಲಿ ರೋಗ ಬರದಿರುವಂತೆ ಮಾಡಿಕೊಳ್ಳಲು ಇದು ತುಂಬಾ ಸಹಾಯಕರವಾಗಿದೆ. ರೋಗಸ್ವಭಾವ, ನಿದಾನ, ಚಿಕಿತ್ಸೆ ಇವುಗಳನ್ನು ಇದರಿಂದ ತಿಳಿಯಬಹುದಾಗಿದೆ. "ಹಿತ್ತಲಗಿಡ ಮದ್ದಲ್ಲವು" ಎಂಬ ಒಂದು ಅಜ್ಞಾನದ ಭ್ರಾಂತಿಯನ್ನು ಬಿಟ್ಟು ಎಲ್ಲರೂ ಈ ಗ್ರಂಥದಿಂದ ಉತ್ತಮ ಪ್ರಯೋಜನವನ್ನು ಪಡೆಯಬಹುದಾಗಿದೆ. ಇಲ್ಲಿ ಹೇಳಿರುವ ವಿಷಯಗಳಿಗೆ ಪ್ರಮಾಣಗಳನ್ನೂ ಕೊಟ್ಟಿರುವುದರಿಂದಲೂ, ಅನುಭವದ ಆಧಾರದ ಮೇಲೆ ಉಂಟಾದ ಇವರ ತಿಳಿವಳಿಕೆಯನ್ನು ಇದರಲ್ಲಿ ಸೇರಿಸಿರುವುದರಿಂದಲೂ, ಈ ಗ್ರಂಥದ ಉಪಯೋಗವು ಹೆಚ್ಚಿನ ಪರಿಮಾಣದಲ್ಲಿ ಜನರಿಗೆ ದೊರೆಯುತ್ತದೆ. ಇಂತಹ ಗ್ರಂಥವನ್ನು ಬರೆದು ಜನಸಾಮಾನ್ಯಕ್ಕೆ ದೊರೆಯುವಂತೆ ಮಾಡಿರುವ ಇವರ ಉಪಕಾರದಿಂದ ಕನ್ನಡಿಗರೆಲ್ಲರೂ ಕೃತಜ್ಞರಾಗಿರಬೇಕಾಗಿದೆ. ಇಂತಹ ಉತ್ತಮ ಗ್ರಂಥಕ್ಕೆ ಉತ್ತೇಜನವೂ, ಪ್ರೋತ್ಸಾಹವೂ ಸರ್ಕಾರದವರಿಂದಲೂ, ಮಹಾ ಜನರಿಂದಲೂ ದೊರೆಯುವುದೆಂದು ನಾನು ನಂಬಿದ್ದೇನೆ. ಮತ್ತು ಅಂತಹ ಸಹಾಯವು ದೊರೆಯಲೆಂದೂ ಇವರಿಂದ ಇನ್ನೂ ಹೆಚ್ಚಿನ ಉಪಕಾರವು ಜನಕ್ಕೆ ದೊರೆಯುವಂತಾಗಲೆಂದೂ ಹಾರೈಸುತ್ತೇನೆ.

Y. Chandrasekharasastri.



ಎ. ಎನ್. ನರಸಿಂಹಯ್ಯ, ಎಂ.ಎಸ್.,ಎಲ್.ಟಿ.,ಪಿ.ಎಚ್.ಡಿ. (ಲಂಡನ್) ಪ್ರಿನ್ಸಿಪಾಲ್.

ಮಹಾರಾಜರ ಸಂಸ್ಕೃತ ಕಾಲೇಜ್, ಮೈಸೂರು.
ತಾ॥ 25-7-1943.

ಆಯುರ್ವೇದಾಚಾರ್ಯ,ವೈದ್ಯಮಾರ್ತಾಂಡ,ಭಿಷಗ್ರತ್ನ, ಸಾಹಿತ್ಯವಾರಿಧಿ ಪಂಡಿತ ಶ್ರೀ ಶಿವಕುಮಾರಸ್ವಾಮಿಗಳವರಿಂದ ರಚಿತವಾಗಿರುವ ಆಯುರ್ವೇದೀಯ ಗ್ರಂಥಮಾಲೆಯ ಪ್ರಥಮ ಪುಷ್ಪವಾದ "ಆರೋಗ್ಯ ದರ್ಪಣ"ವನ್ನು ಆಮೂಲಾಗ್ರವಾಗಿ ಪರಿಶೀಲಿಸಿರುತ್ತೇನೆ. ಇವರು ಆಯುರ್ವೇದದಲ್ಲಿ ಪಂಡಿತರಾಗಿರುವುದಲ್ಲದೆ ತರ್ಕ ವೇದಾಂತ ಶಾಸ್ತ್ರಗಳನ್ನೂ ಅಧ್ಯಯನ ಮಾಡಿರುವುದರಿಂದ, ಗ್ರಂಥಗಳನ್ನು ಯುಕ್ತಿಯುಕ್ತವಾಗಿಯೂ ಹೃದಯಂಗಮವಾಗಿಯೂ ಬರೆಯಲು ತಕ್ಕ ಯೋಗ್ಯತೆಯನ್ನು ಹೊಂದಿರುತ್ತಾರೆ. ಇವರು ಈ ಗ್ರಂಥದ ಪೀಠಿಕೆಯಲ್ಲಿ ಆಯುರ್ವೇದದ ಮಹತ್ವ

ವನ್ನೂ ಅದರ ಉನ್ನತಿ ಅವನತಿಗಳ ಕಾಲ, ಕಾರಣಗಳನ್ನೂ ತಿಳಿಸಿ ಪುನಃ ಆಯುರ್ವೇದವು ಅದರ ಮೊದಲಿನ ಉನ್ನತಿಯನ್ನು ಪಡೆಯುವ ಕಾಲವು ಈಗ ಒದಗಿದೆಯೆಂದೂ, ಅದಕ್ಕೆ ಪ್ರೋತ್ಸಾಹವು ಮಹಾರಾಜರುಗಳಿಂದಲೂ, ಅನೇಕ ಸರ್ಕಾರಗಳಿಂದಲೂ, ಪ್ರಜೆಗಳಿಂದಲೂ ದೊರೆಯುತ್ತಲಿದೆಯೆಂದೂ ತಿಳಿಸಿರುವುದು ವಾಸ್ತವವಾಗಿದೆ. ಈ ಪಂಡಿತರೇ ತಿಳಿಸಿರುವಂತೆ ಇಂತಹ ಸಮಯದಲ್ಲಿ ಆಯುರ್ವೇದ ವಿದ್ವಾಂಸರು ಅನೇಕ ಶೋಧನೆಗಳನ್ನು ನಡೆಸಿ, ಆಯುರ್ವೇದವು ಪೂರ್ವದ ಉಚ್ಛ್ರಾಯ ಸ್ಥಿತಿಯನ್ನು ಹೊಂದುವಂತೆ ಮಾಡಿ, ಸಮಸ್ತ ಪ್ರಪಂಚಕ್ಕೆ ಮಾರ್ಗದರ್ಶಿಗಳಾಗುವರೆಂದು ಆಶಿಸೋಣ.

ಈ ಗ್ರಂಥವನ್ನು ಬರೆಯುವುದರಲ್ಲಿ ಇವರು ಅನುಸರಿಸಿರುವ ಮಾರ್ಗವು ಸುಗಮವಾಗಿರುತ್ತದೆ. ಈ ಗ್ರಂಥಕರ್ತರು ಸರ್ವಸಾಮಾನ್ಯರಿಗೂ ತಿಳಿಯುವಂತೆಯೂ, ಆರೋಗ್ಯವನ್ನು ಕಾಪಾಡಿಕೊಳ್ಳಲು ಹಣದ ವ್ಯಯವಿಲ್ಲದೆ ಸುಲಭ ಚಿಕಿತ್ಸೆಗಳನ್ನು ಈ ಗ್ರಂಥದ ಸಹಾಯದಿಂದ ಮಾಡಿಕೊಳ್ಳಲು ಅನುಕೂಲವಾಗುವಂತೆಯೂ ಬರೆದಿರುತ್ತಾರೆ. ಸಾಮಾನ್ಯವಾದ ಆಹಾರಪದಾರ್ಥಗಳು, ಕಾಯಿಪಲ್ಯಗಳು, ಹಣ್ಣುಗಳು, ಇವುಗಳಿಂದ ಆಗುವ ಉಪಯೋಗಗಳನ್ನೂ, ಅವುಗಳನ್ನು ಕೆಲವು ಅನುಪಾನಗಳೊಡನೆ ಸೇವಿಸುವುದರಿಂದ ನಿವಾರಣೆಯಾಗುವ ರೋಗಗಳನ್ನೂ ತಿಳಿಸಿರುತ್ತಾರೆ. ಈ ಗ್ರಂಥದಿಂದ ಪಟ್ಟಣಗರಿಗೂ ಮತ್ತು ಹಳ್ಳಿಗಳಲ್ಲಿರುವವರಿಗೂ ಬಹಳ ಉಪಕಾರವಾಗುತ್ತದೆಂದು ಖಂಡಿತವಾಗಿ ಹೇಳಬಹುದು. ಹಳ್ಳಿಯಲ್ಲಿರುವವರಿಗೆ ಇವರು ತಿಳಿಸಿರುವ ನಾರು ಬೇರುಗಳು ಸುಲಭವಾಗಿ ದೊರಕುವುದರಿಂದ, ಗ್ರಾಮೋದ್ಧಾರಕ ಸಂಸ್ಥೆಯವರು ಇಂತಹ ಗ್ರಂಥಗಳ ಪ್ರಚಾರವನ್ನು ಗ್ರಾಮಗಳಲ್ಲಿ ಮಾಡುವ ಕಾರ್ಯವನ್ನು ಕೈಗೊಳ್ಳುವುದು ಒಳ್ಳೆಯದಾಗಿ ತೋರುತ್ತದೆ. ಅಲ್ಲದೆ ಈ ಸಂಸ್ಥೆಯವರು ಹಳ್ಳಿಗಳಲ್ಲಿ ಜನರು ಸಾಮಾನ್ಯವಾಗಿ ತಿಳಿದು ಅನುಭವದಲ್ಲಿಟ್ಟುಕೊಂಡಿರುವ ಆಯುರ್ವೇದದ ಸುಲಭ ಚಿಕಿತ್ಸೆಗಳನ್ನು ಸಂಗ್ರಹಿಸಿ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವುದು ಅತ್ಯಾವಶ್ಯಕವಾಗಿದೆ. ಒಟ್ಟಿನಲ್ಲಿ ಈ ಗ್ರಂಥವು ಸರ್ವರೂ ಓದಿ ಪ್ರಯೋಜನವನ್ನು ಪಡೆಯಲರ್ಹವಾಗಿರುವುದರಿಂದ ಈ ಗ್ರಂಥಕರ್ತರು ಅಭಿನಂದನಾರ್ಹರಾಗಿರುತ್ತಾರೆ. ಈ ಆಯುರ್ವೇದೀಯ ಗ್ರಂಥಮಾಲೆಯ ಮುಂದಿನ ಪುಷ್ಪಗಳು ಶೀಘ್ರದಲ್ಲಿಯೇ ಜನರಿಗೆ ದೊರಕಿ ಕನ್ನಡಿಗರೆಲ್ಲರಿಗೂ ಹೆಚ್ಚಿನ ಉಪಯೋಗವಾಗಲೆಂದು ಹಾರೈಸುತ್ತೇನೆ.

A. N. Narasimhia.



ಆಸ್ಥಾನ ಮಹಾವಿದ್ವಾನ್, ಪಂಡಿತರತ್ನಂ
ಶ್ರೀಶ್ರೀ ಗುರುಶಾಂತಶಾಸ್ತ್ರೀ

ತ್ಯಾಗರಾಜರೋಡ್,
ಮೈಸೂರು, 29-7-1943

ಬೆಂಗಳೂರು ಮುತ್ತಿನಕಂತೆ ಮಠಾಧ್ಯಕ್ಷರಾದ ಆಯುರ್ವೇದಾಚಾರ್ಯ, ವೈದ್ಯ ಮಾರ್ತಂಡ, ಭಿಷಗ್ರತ್ನ, ಸಾಹಿತ್ಯವಾರಿಧಿ ಪಂಡಿತ ಶ್ರೀ ಶಿವಕುಮಾರಸ್ವಾಮಿಗಳು ರಚಿಸಿರುವ "ಆರೋಗ್ಯ ದರ್ಪಣ" ವೆಂಬ ಗ್ರಂಥವನ್ನು ಪರಿಶೀಲಿಸಿರುತ್ತೇನೆ. ಶ್ರೀ ಸ್ವಾಮಿಗಳವರು ತಮ್ಮ ಈ ಮೊದಲನೆಯ ಗ್ರಂಥದಲ್ಲಿ ತಾವು ಕಾಶಿಯಲ್ಲಿ ದೀರ್ಘಕಾಲ ಅಧ್ಯಯನಮಾಡಿರುವ ನ್ಯಾಯ, ವೇದಾಂತ, ಆಯುರ್ವೇದ ಗ್ರಂಥಗಳ ಸಾರವನ್ನು ಸಂಗ್ರಹಿಸಿ ಲೋಕಾನುಭವದೊಡನೆ ಸಮಾವೇಶಗೊಳಿಸಿರುತ್ತಾರೆ. ಇದರ ವಿಸ್ತಾರವಾದ ಪೀಠಿಕೆಯಲ್ಲಿ ಆಯುರ್ವೇದದ ಪ್ರಾಚೀನೇತಿಹಾಸ, ಅದರ ಉನ್ನತಿ ಮತ್ತು ಕ್ರಮಿಕವಾದ ಅವನತಿ, ಆಯುರ್ವೇದ ಗ್ರಂಥಗಳು, ಈ ವಿಷಯಗಳನ್ನು ಕೂಲಂಕಷವಾಗಿ ವಿವೇಚಿಸಿ ಬರೆದಿರುವರಲ್ಲದೆ ಇದಕ್ಕೆ ಪೌರ್ವಾತ್ಯ ಪಾಶ್ಚಿಮಾತ್ಯರ ಅನೇಕ ಪ್ರಮಾಣಗಳನ್ನೂ ಉಲ್ಲೇಖಿಸಿರುತ್ತಾರೆ.

ಇನ್ನು ಗ್ರಂಥದ ವಿಷಯವನ್ನು ತೆಗೆದುಕೊಂಡರೆ-ಈ ಗ್ರಂಥವು ಆದಿಯಿಂದ ಅಂತ್ಯದವರೆಗೂ ಸದಾಚಾರ, ಆರೋಗ್ಯರಕ್ಷಣೆಗಳಿಗೆ ಅನುಕೂಲಗಳಾದ ಉಪಯುಕ್ತ ವಿಷಯಗಳನ್ನೊಳಗೊಂಡಿದೆ. ನಮ್ಮ ನಿತ್ಯೋಪಯೋಗಿಗಳಾದ ಆಹಾರ ಪದಾರ್ಥಗಳ ಗುಣದೋಷಗಳನ್ನರಿತು ಆರೋಗ್ಯವನ್ನು ರಕ್ಷಿಸಿಕೊಂಡು, ರೋಗ ಬಂದಾಗ ಆ ಪದಾರ್ಥಗಳ ಸಹಾಯದಿಂದಲೇ ಅನೇಕ ವಿಧ ಚಿಕಿತ್ಸೆಗಳನ್ನು ಬಹು ಸುಲಭವಾಗಿ ಮಾಡಿಕೊಳ್ಳುವುದರ ಮೂಲಕ, ರೋಗನಿವಾರಣೆಯನ್ನು ಮಾಡಿಕೊಳ್ಳಲು ಈ ಗ್ರಂಥವು ಪ್ರತಿಯೊಬ್ಬ ಮನುಷ್ಯನಿಗೂ ಸಹಾಯಕಾರಿಯಾಗಿರುತ್ತದೆ. ಇಂತಹ ಜನೋಪಕಾರಿಯಾದ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಬರೆದು ಪ್ರಕಟಿಸಿರುವುದಕ್ಕಾಗಿ ಕನ್ನಡನಾಡಿನ ಜನಗಳೆಲ್ಲರೂ ಈ ಗ್ರಂಥಕರ್ತರಿಗೆ ಅನಂತ ಧನ್ಯವಾದಗಳನ್ನು ಅರ್ಪಿಸಬೇಕಾಗಿದೆ. ಇಂತಹ ಗ್ರಂಥಕ್ಕೆ ರಾಜರ ಆಶ್ರಯವೂ, ಪ್ರಜೆಗಳ ಸಹಾನುಭೂತಿಯುತವಾದ ಬೆಂಬಲವೂ ದೊರೆಯಬೇಕಾದುದು ಮುಖ್ಯವಾಗಿದೆ. ಇಂತಹ ಪ್ರೋತ್ಸಾಹಗಳು ದೊರೆತು, ಶ್ರೀ ಸ್ವಾಮಿಗಳು ಆರಂಭಿಸಿರುವ ಆಯುರ್ವೇದೀಯ ಗ್ರಂಥಮಾಲೆಯ ಮುಂದಿನ ಪುಷ್ಪಗಳೂ ಬಹು ಬೇಗನೆ ಪ್ರಕಟಗೊಂಡು, ಅವುಗಳ ಪರಿಮಳದಿಂದ ಕರ್ಣಾಟಕ ದೇಶೀಯರು ಸಂತೋಷಪಡುವಂತಹ ಸನ್ನಿವೇಶವು ಶೀಘ್ರವಾಗಿ ಒದಗಲೆಂದು ಹಾರೈಸುತ್ತೇನೆ.

ಗುರುಶಾಂತಶಾಸ್ತ್ರೀ.



# ವಿಷಯಾನುಕ್ರಮಣಿಕೆ




| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ಆರೋಗ್ಯ ಸ್ವರೂಪ ನಿರೂಪಣೆ .... | ೧ | |
| ಪ್ರಾತಃಕಾಲ .... .... | ೬ | |
| ಶೌಚವಿಧಿ .... .... | ೯ | |
| ದಂತ ಶೋಧನೆ .... .... | ೧೫ | |
| ಹಲ್ಲಿನ ರೋಗ ನಿವಾರಣೆಗೆ ಮತ್ತು ಭದ್ರತೆಗೆ | ೧೭ | ೧–೨ |
| ವ್ಯಾಯಾಮ .... .... | ೨೦ | |
| ತೈಲಾಭ್ಯಂಗ .... .... | ೩೦ | |
| ಗುಣಕಾರಿ ತೈಲಗಳು .... .... | ೩೫ | ೧ |
| ,, .... .... | ೩೬ | ೨ |
| ,, .... .... | ೩೭ | ೩ |
| ಸ್ನಾನ .... .... | ೩೭ | |
| ದೇವತಾರ್ಚನೆ .... .... | ೪೨ | |
| ಆಹಾರ ವಿವೇಚನೆ .... .... | ೫೫ | |
| ಆಹಾರ ನಿಯಮಗಳು .... .... | ೫೯ | |
| ಆಹಾರ ವಸ್ತುಗಳು (ಧಾನ್ಯಗಳು) .... | ೭೪ | |
| ಅಕ್ಕಿ .... .... .... | ೭೬ | |
| ಪ್ರದರ ರೋಗಕ್ಕೆ .... .... | ೭೮ | ೧ |
| ಉರಿ ಮೂತ್ರಕ್ಕೆ .... .... | ೭೮ | ೨ |
| ಹೊಟ್ಟೆಯಲ್ಲಿನ ಜಂತುಗಳ ನಾಶಕ್ಕೆ .... | ೭೮ | ೩ |
| ಭೇದಿಯು ನಿಲ್ಲುವುದಕ್ಕೆ .... | ೭೯ | ೪ |
| ವಾಂತಿಯು ನಿಲ್ಲುವುದಕ್ಕೆ .... | ೭೯ | ೫ |
| ಹೊಟ್ಟೆಯ ಉರಿ, ವಾಂತಿಗೆ .... | ೭೯ | ೬ |
| ಜ್ವರ, ದಣವು, ಬಾಯಾರಿಕೆ, ಹೊಟ್ಟೆಯುರಿಗಳಿಗೆ | ೭೯ | ೭ |
| ಕಾಲರಾದ ವಾಂತಿ, ಸಾಮಾನ್ಯ ವಾಂತಿಗಳಿಗೆ | ೭೯ | ೮ |
| ಗರ್ಭಿಣಿಯ ವಾಕರಿಕೆಗೆ .... | ೭೯ | ೯ |
| ಅರ್ಧತಲೆಯ ನೋವಿಗೆ .... | ೭೯ | ೧೦ |
| ಮಕ್ಕಳ ಕೆಮ್ಮಿಲಿಗೆ .... | ೮೦ | ೧೧ |
| ವಾಂತಿಗೆ .... | ೮೦ | ೧೨ |

| ವಿಷಯ | ಪುಟ | ಚಿಕಿತ್ಸೆಯ ನಂ. |
| --- | --- | --- |
| ಗೋಧಿ .... .... .... | ೮೦ | |
| ಸಾಧಾರಣ ಕೆಮ್ಮಲಿಗೆ .... .... | ೮೧ | ೧ |
| ಒಣ ಕೆಮ್ಮಲಿಗೆ, ಶ್ಲೇಷ್ಮವು ನೀರಾಗಿ ಹೊರಗೆ ಬರುವುದಕ್ಕೆ | ೮೧ | ೨ |
| ಆಸನದ ಸೋವಿಗೆ .... .... | ೮೧ | ೩ |
| ಶರೀರ ಪುಷ್ಟಿಗೆ .... .... | ೮೧ | ೪ |
| ಯಾವುದಾದರೊಂದು ಅಂಗವು ಅದರುತ್ತಿರುವುದಕ್ಕೆ | ೮೧ | ೫ |
| ದಮ್ಮು, ಕೆಮ್ಮು, ಎದೆ ನೋವು, ಜೀರ್ಣ ಜ್ವರ, ಕರುಳಿನ ಬಾವು, ಇವುಗಳಿಗೆ | ೮೨ | ೬ |
| ಮೇಹ ನಿವಾರಣೆಗೆ ಉತ್ತಮ ಪ್ರಯೋಗ .... | ೮೨ | ೭ |
| ಎಲುಬು ಮುರಿದಿರುವುದಕ್ಕೆ ಅಥವಾ ಸೊಟ್ಟಾಗಿರುವುದಕ್ಕೆ .... | ೮೨ | ೮ |
| ಪೆಟ್ಟು ತಗಲಿ ಬಹಳ ನೋವಾಗಿರುವುದಕ್ಕೆ ... | ೮೩ | ೯ |
| ಪೆಟ್ಟು ತಗಲಿ ಬಹಳ ಬಾಧೆಯಾಗಿರುವುದಕ್ಕೆ | ೮೩ | ೧೦ |
| ಕೀಲು ಮುರಿದಿರುವುದಕ್ಕೆ ಲೇಪ .... | ೮೪ | ೧೧ |
| ಏಟು ತಗಲಿ ನೋವಾಗಿರುವುದಕ್ಕೆ .... | ೮೪ | ೧೨ |
| ಜವೆ .... .... .... | ೮೪ | |
| ಮೇಹ ರೋಗ ನಿವಾರಣೆಗೆ .... | ೮೫ | ೧ |
| ಪಚನ ಶಕ್ತಿಯು ಸರಿಯಾಗುವುದಕ್ಕೆ .... | ೮೬ | ೨ |
| ಪ್ರಮೇಹ ನಿವಾರಣೆಗೆ ಉತ್ತಮ ಉಪಾಯ | ೮೭ | ೩ |
| ರಾಗಿ .... .... .... | ೮೭ | |
| ಜೋಳ .... .... .... | ೮೯ | |
| ಇಸಬು, ಹುಳಕಡ್ಡಿಗೆ ಲೇಪ .... | ೯೦ | ೧ |
| ಇಸಬಿಗೆ .... .... .... | ೯೦ | ೨ |
| ಗಾಯಗಳಿಗೆ .... .... | ೯೦ | ೩ |
| ಎದೆ ಹಾಲಿನ ವೃದ್ಧಿಗೆ .... .... | ೯೦ | ೪ |
| ಬಲ, ವೀರ್ಯಗಳ ವೃದ್ಧಿಗೆ .... | ೯೨ | ೫ |
| ಸಜ್ಜೆ .... .... .... | ೯೨ | |
| ನವಣೆ .... .... .... | ೯೨ | |
| ಹಾರಕ .... .... .... | ೯೧ | |
| ಸಾಮೆ .... .... .... | ೯೨ | |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ತೊಗರಿ .... .... .... | ೯೧ | |
| ಕಾಲರಾ ನಿವಾರಣೆಗೆ ... .... | ೯೩ | ೧ |
| ಕಣ್ಣಿನ ಪರೆಯ ನಿವಾರಣೆಗೆ .... | ೯೩ | ೨ |
| ಬಿಕ್ಕಳಿಕೆಗೆ .... .... | ೯೪ | ೩ |
| ಸಂಗ್ರಹಣಿ, ಕಾವಾಲೆ, ಹೊಟ್ಟೆ ನೋವುಗಳ ನಿವಾರಣೆಗೆ | ೯೪ | ೪ |
| ಅಂಗಾಲುರಿಗೆ .... .... | ೯೪ | ೫ |
| ಗೂದೆ ಹೊರಟಿರುವುದಕ್ಕೆ .... | ೯೪ | ೬ |
| ಮುಖದ ಮೇಲಿನ ಕಲೆಗಳ ನಿವಾರಣೆಗೆ .... | ೯೪ | ೭ |
| ಚರ್ಮ ಶೋಧಕವಾದ ಪೌಡರ್ .... | ೯೪ | ೮ |
| ಕೆಂಪು ಚೇಳಿ, ಬಟಾಣಿ ಮುಂತಾದುವುಗಳ ಪೌಡರ್, ಚರ್ಮಗಳ ಸ್ವಚ್ಛತೆಗೆ | ೯೫ | ೯ |
| ಚರ್ಮರೋಗ ನಾಶಕವಾದ ಉತ್ತಮ ಪೌಡರ್ | ೯೬ | ೧೦ |
| ಮುಖದ ಮೇಲಿನ ಕಲೆಗಳ ನಾಶಕ್ಕೆ .... | ೯೭ | ೧೧ |
| ಮುಖದ ಮೇಲಿನ ಕಲೆಗಳಿಗೆ ಲೇಪ .... | ೯೭ | ೧೨ |
| ಮಡಿಮೆಗಳ ನಿವಾರಣೆಗೆ .... | ೯೭ | ೧೩ |
| ಸಂಗ್ರಹಣಿಗೆ ಉತ್ತಮ ಚಿಕಿತ್ಸೆ .... | ೯೭ | ೧೪ |
| ಹಾವಿನ ವಿಷಕ್ಕೆ .... | ೯೭ | ೧೫ |
| ಹೆಸರು .... .... .... | ೯೮ | |
| ಪಿತ್ತ ವಿಕಾರ ಮತ್ತು ಎದೆಯುರಿಗೆ .... | ೯೯ | ೧ |
| ಬಾಯಾರಿಕೆ, ಹೊಟ್ಟೆಯುರಿ, ಭೇದಿಗಳಿಗೆ | ೯೯ | ೨ |
| ವಾಂತಿ, ಅತಿಸಾರ, ಜ್ವರ, ಬಾಯಾರಿಕೆ ಭ್ರಮೆಗಳಿಗೆ | ೯೯ | ೩ |
| ಜ್ವರ ಸಹಿತವಾದ ಭೇದಿಗೆ .... | ೯೯ | ೪ |
| ಬಲ, ವೀರ್ಯ, ವರ್ಣಗಳ ವೃದ್ಧಿಗೆ .... | ೧೦೦ | ೫ |
| ಹೆಚ್ಚಾಗಿ ಬರುತ್ತಿರುವ ಬೆವರಿನ ನಿವಾರಣೆಗೆ | ೧೦೦ | ೬ |
| ಸ್ನಾನ ಕಾಲದಲ್ಲಿ ಉಪಯೋಗಿಸುವುದಕ್ಕೆ ಉತ್ತಮ ಚೂರ್ಣ | ೧೦೧ | ೭ |
| ಕಡಲೆ .... .... .... | ೧೦೧ | |
| ನೆಗಡಿಗೆ .... .... | ೧೦೨ | ೧ |
| ಕಫವು ಗಟ್ಟಿಯಾದಾಗ ಬರುವ ಎದೆನೋವು, ಬಿಕ್ಕಳಿಕೆಗಳಿಗೆ | ೧೦೨ | ೨ |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ಸಕಲವಿಧ ವಾತ ರೋಗಗಳು, ಮೇಹ ರೋಗ, ಬುದ್ಧಿ ಭ್ರಮೆ, ಪಾಂಡು, ಮೂತ್ರಾಘಾತವು ಗಳು ಮತ್ತು ಬಾಣಂತಿಯ ರೋಗ, ಇವು ಗಳಿಗೆ ಮತ್ತು ಬಲ, ವೀರ್ಯಗಳ ಪುಷ್ಟಿಗೆ | ೧೧೮ | ೬ |
| ಸಬ್ಬಸಿಗೆ ಸೊಪ್ಪು .... .... | ೧೧೯ | |
| ಬಾವು, ನೋವುಗಳಿಗೆ .... .... | ೧೧೯ | ೧ |
| ಕೀಲು ನೋವಿಗೆ .... .... | ೧೧೯ | ೨ |
| ಲಕ್ವಾ, ವಾಯು ನೋವು, ಬಾವುಗಳಿಗೆ .... | ೧೧೯ | ೩ |
| ಮೂಲವ್ಯಾಧಿಯ ಮೊಳಕೆಗಳು ಬೀಳುವುದಕ್ಕೆ | ೧೨೦ | |
| ಜೇನುನೊಣಗಳು ಕಡಿದದ್ದಕ್ಕೆ .... | ೧೨೦ | ೪ |
| ಆಹಾರ ಪಚನ ಮತ್ತು ಅಜೀರ್ಣಕ್ಕೆ .... | ೧೨೦ | ೫ |
| ಪುಳ್ಳಂಪುರಚಿ ಸೊಪ್ಪು .... .... | ೧೨೧ | |
| ಕಣ್ಣಿನಲ್ಲಿ ಬೆಳೆದಿರುವ ದುರ್ಮಾಂಸವು ಕರಗುವುದಕ್ಕೆ | ೧೨೨ | ೧ |
| ಬಹುದಿನದ ಸಂಗ್ರಹಣಿ, ಅತಿಸಾರ, ಹೊಟ್ಟೆಯಲ್ಲಿ ಬೆಳೆದಿರುವ ಗಡ್ಡೆಗಳಿಗೆ | ೧೨೨ | ೨ |
| ಸಂಗ್ರಹಣಿ, ಮೂಲವ್ಯಾಧಿ, ಕಟ್ಟುಮೂತ್ರಗಳಿಗೆ | ೧೨೨ | ೩ |
| ವಿಷ್ಣುಕ್ರಾಂತಿ ಸೊಪ್ಪು .... .... | ೧೨೩ | |
| ಹಾವಿನ ವಿಷಕ್ಕೆ .... .... | ೧೨೪ | ೧ |
| ಗರ್ಭವು ನಿಲ್ಲುವುದಕ್ಕೆ ಉಪಾಯ ಮತ್ತು ಸಲಹೆ | ೧೨೪ | ೨ |
| ಗರ್ಭ ಸ್ಥಾಪನೆಗೆ .... .... | ೧೨೬ | ೩ |
| ,, .... .... | ೧೨೭ | ೪ |
| ಗರ್ಭವು ನಿಲ್ಲುವದಕ್ಕೆ .... .... | ೧೨೭ | ೫ |
| ಗಂಡಮಾಲೆಗೆ .... .... | ೧೨೮ | ೬ |
| ಪರಿಣಾಮ ಶೂಲೆಗೆ .... .... | ೧೨೮ | ೭ |
| ದಂಟಿನ ಸೊಪ್ಪು .... .... | ೧೨೮ | |
| ಚಕ್ಕೋತ ಸೊಪ್ಪು .... .... | ೧೨೮ | |
| ಗೋಣಿ ಸೊಪ್ಪು .... .... | ೧೨೮ | |
| ಹೀರೇಕಾಯಿ .... .... | ೧೨೮ | |
| ಕಣ್ಣಿನ ಪರೆಗೆ .... .... | ೧೩೦ | ೧ |
| ಹುಚ್ಚುನಾಯಿಯ ವಿಷಕ್ಕೆ .... | ೧೩೧ | ೨ |
| ಮೂಲವ್ಯಾಧಿಯ ಮೊಳಕೆಗಳಿಗೆ ಲೇಪ .... | ೧೩೧ | ೩ |
| ,, | ೧೩೧ | ೪ |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ಹಾವಿನ ವಿಷಕ್ಕೆ .... .... | ೧೩೧ | ೫ |
| ಮೂರ್ಛೆಗೆ .... .... | ೧೩೧ | ೬ |
| ಹಾಗಲಕಾಯಿ .... .... | ೧೩೨ | |
| ಹಾವಿನ ವಿಷಕ್ಕೆ .... .... | ೧೩೨ | ೧ |
| ಇಸಬು, ಹುಳಕಡ್ಡಿ, ನವೆಗಳಿಗೆ .... | ೧೩೨ | ೨ |
| ಅತಿಸಾರಕ್ಕೆ .... .... | ೧೩೨ | ೩ |
| ರಕ್ತಮೂಲ ವ್ಯಾಧಿಗೆ .... | ೧೩೩ | ೪ |
| ಲೀವರ್ರಿನ (ಯಕೃತ್ತು) ವಿಕಾರಕ್ಕೆ .... | ೧೩೩ | ೫ |
| ಚಾಕು, ಕತ್ತಿಗಳ ಗಾಯಕ್ಕೆ .... | ೧೩೩ | ೬ |
| ಕಾಲರಾ ರೋಗಕ್ಕೆ .... .... | ೧೩೩ | ೭ |
| ಪಿತ್ತದ ಗಂಟೆ (ಬಕ್ಕೆ) ಗಳಿಗೆ .... | ೧೩೩ | ೮ |
| ಹಳೆಯ ಚರ್ಮರೋಗಕ್ಕೆ .... | ೧೩೪ | ೯ |
| ಅಸಾಧ್ಯ ಚರ್ಮ ರೋಗಗಳಿಗೆ .... | ೧೩೪ | ೧೦ |
| ಕಿಡಬು ಹೊರಬೀಳುವುದಕ್ಕೆ .... | ೧೩೪ | ೧೧ |
| ರಾತ್ರಿಯಲ್ಲಿ ಕಣ್ಣು ಕಾಣಿಸದಿರುವುದಕ್ಕೆ .... | ೧೩೫ | ೧೨ |
| ಗೌರೀಪಾಷಾಣದ ವಿಷವು ಇಳಿಯುವುದಕ್ಕೆ | ೧೩೫ | ೧೩ |
| ಪಡವಲಕಾಯಿ .... .... | ೧೩೫ | |
| ಮೈಯ ನವೆಗೆ .... .... | ೧೩೬ | ೧ |
| ಕಫದ ಜ್ವರಕ್ಕೆ .... .... | ೧೩೬ | ೨ |
| ಕಫದಜ್ವರ, ಕೆಮ್ಮಲು, ಗಂಟಲಿನ ಸೋವುಗಳಿಗೆ | ೧೩೬ | ೩ |
| ಕಫದ ಜ್ವರಕ್ಕೆ .... .... | ೧೩೭ | ೪ |
| ೨ರ, ೩ರ, ೪ರ, ಜ್ವರಗಳಿಗೆ .... | ೧೩೭ | ೫ |
| ನವೆ, ಗಂಡೆ, ಮೈಯ ಉರಿ, ಅಗ್ನಿ ವೃದ್ಧಿಗಳಿಗೆ | ೧೩೭ | ೬ |
| ಹುಳಿತೇಗು, ಗಂಡೆಗಳು, ನವೆಗಳಿಗೆ .... | ೧೩೭ | ೭ |
| ಕೂದಲು ಉದುರಿ ಹೋಗಿರುವುದಕ್ಕೆ .... | ೧೩೭ | ೮ |
| ಬದನೆಕಾಯಿ .... .... | ೧೩೮ | |
| ಏಟು ತಗಲಿ ನೋವುಂಟಾಗಿದ್ದರೆ .... | ೧೩೮ | ೧ |
| ಕಣ್ಣಿನಲ್ಲಿ ಬೆಳೆದಿರುವ ಪರೆಗೆ .... | ೧೩೯ | ೨ |
| ,, .... .... | ೧೩೯ | ೩ |
| ಕಿವಿಯಲ್ಲಿ ಸೇರಿರುವ ಹುಳಗಳ ನಾಶಕ್ಕೆ ಮತ್ತು ಕಿವಿಯು ಸೋರುತ್ತಿರುವುದಕ್ಕೆ | ೧೩೯ | ೪ |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ಕಣ್ಣಿನಲ್ಲಿ ಬೆಳೆದಿರುವ ಪರೆಗೆ .... .... | ೧೩೯ | ೫ |
| ದತ್ತೂರಿಯ ವಿಷದ ನಿವಾರಣೆಗೆ .... | ೧೩೯ | ೬ |
| ನಾರು ಹುಣ್ಣಿಗೆ .... .... | ೧೪೦ | ೭ |
| ಶೀತಾಧಿಕ್ಯದಿಂದ ಕೈಗಳು ಬಿವೆಯುತ್ತಿದ್ದರೆ | ೧೪೦ | ೮ |
| ಸ್ತ್ರೀಯರ ಮಾಸಿಕದ ಸಮಯದಲ್ಲಿ ಹೆಚ್ಚಾಗಿ ರಕ್ತವು ಹೋಗುತ್ತಿದ್ದರೆ | ೧೪೦ | ೯ |
| ಕುಂಬಳಕಾಯಿ .... .... | ೧೪೦ | |
| ಬುದ್ಧಿಯ ಭ್ರಮಣೆಗೆ .... | ೧೪೧ | ೧ |
| ಬುದ್ಧಿಭ್ರಮಣೆ ಅಥವಾ ಹುಚ್ಚು ಹಿಡಿದಿರುವುದಕ್ಕೆ | ೧೪೧ | ೨ |
| ಮೆದಳಿನ ದುರ್ಬಲತೆಗೆ.... .... | ೧೪೨ | ೩ |
| ಮೂಲದ ಮೊಳಕೆಗಳ ನಾಶಕ್ಕೆ .... | ೧೪೨ | ೪ |
| ಬೂದಿಗುಂಬಳಕಾಯಿ .... .... | ೧೪೨ | |
| ಮೂತ್ರದ ತಡೆಗೆ .... | ೧೪೨ | ೧ |
| ಕಿಬ್ಬೊಟ್ಟೆ, ಮೂತ್ರನಾಳಗಳ ಶೂಲೆ ಮತ್ತು ಸಕ್ಕರೆ ಹೋಗುತ್ತಿರುವುದಕ್ಕೆ | ೧೪೩ | ೨ |
| ಮೂಗು-ಬಾಯಿ-ಆಸನಗಳಿಂದ ರಕ್ತವು ಸೋರುತ್ತಿದ್ದರೆ ಮತ್ತು ಹುಳಿತೇಗು, ಬಾಯಾರಿಕೆ ಕಾಮಾಲೆಗಳಿಗೆ | ೧೪೩ | ೩ |
| ಮೂಗು, ಬಾಯಿ ಆಸನಗಳಿಂದ ರಕ್ತವು ಸೋರುತ್ತಿದ್ದರೆ, ಪಿತ್ತಜ್ವರ, ಬಾಯಾರಿಕೆ ಪ್ರದರ ಒಣಗಿಕೊಂಡಿರುವುದು, ವಾಂತಿ, ಕೆಮ್ಮಲು, ಉಬ್ಬಸ, ಎದೆನೋವು, ಕ್ಷಯ, ಎದೆಯ ಗಾಯ, ಲೀವರ್ರಿನ ಬೆಳವಣಿಗೆಗೆ | ೧೪೩ | ೪ |
| ಗೂರಲು, ಕೆಮ್ಮಲುಗಳಿಗೆ .... | ೧೪೪ | ೫ |
| ಮೂತ್ರದ ತಡೆಗೆ .... .... | ೧೪೫ | ೬ |
| ಮೂತ್ರದ ತಡೆ, ಮೂತ್ರದ ಹರಳು, ಸಕ್ಕರೆ ಹೋಗುವುದಕ್ಕೆ .... | ೧೪೫ | ೭ |
| ಸೋರೇಕಾಯಿ .... .... | ೧೪೫ | |
| ವಾಂತಿ, ತಲೆ ತಿರುಗುವಿಕೆ, ಪಿತ್ತವಿಕಾರಗಳಿಗೆ | ೧೪೫ | ೧ |
| ಮೂತ್ರದ್ವಾರದಿಂದ ಕೀವು ರಕ್ತಗಳು ಬರುತ್ತಿದ್ದರೆ ಮತ್ತು ಮೂತ್ರದ ತಡೆಗೆ .... | ೧೪೫ | ೨ |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ವೀರ್ಯ ವೃದ್ಧಿ ಮತ್ತು ಬಲವರ್ಣಗಳ ವೃದ್ಧಿಗೆ | ೧೪೭ | ೩ |
| ವೀರ್ಯಸ್ತಂಭನ ಮತ್ತು ಶೀಘ್ರಪತನಕ್ಕೆ | ೧೪೬ | ೪ |
| ಕಹಿ ಸೋರೆ .... .... | ೧೪೭ | |
| ಕಣ್ಣುಗಳ ಪರೆ, ರಾತ್ರಿಯು ಅಂಧತ್ವಗಳಿಗೆ | ೧೪೭ | ೧ |
| ಹಾವಿನ ವಿಷಕ್ಕೆ .... .... | ೧೪೭ | ೨ |
| ಮೂಲವ್ಯಾಧಿಯ ಮೊಳಕೆಗಳಿಗೆ .... | ೧೪೮ | ೩ |
| ಗಂಡಮಾಲೆಗೆ .... .... | ೧೪೮ | ೪ |
| ಸೌತೇಕಾಯಿ .... .... | ೧೪೮ | |
| ಮೂತ್ರದಹರಳು (Calculus) ಕರಗುವುದಕ್ಕೆ | ೧೪೯ | ೧ |
| ಕಟ್ಟು ಮೂತ್ರಕ್ಕೆ .... .... | ೧೪೯ | ೨ |
| ಮೂತ್ರನಾಳದಲ್ಲಿ ಹುಣ್ಣಾಗಿ ಮೂತ್ರವು ಕಟ್ಟಿಕೊಂಡಿದ್ದರೆ | ೧೪೯ | ೩ |
| ,, .... .... | ೧೪೯ | ೪ |
| ಮೂತ್ರನಾಳದ ಹುಣ್ಣು (ಗನೇರಿಯಾ) ಮತ್ತು ಸ್ತ್ರೀಯರ ಶ್ವೇತ ಪ್ರದರಕ್ಕೆ (ಬಿಳುಪು) | ೧೫೦ | ೫ |
| ಮೂಗು, ಬಾಯಿ, ಆಸನಗಳಿಂದ ರಕ್ತವು ಬೀಳುತ್ತಿದ್ದರೆ | ೧೫೦ | ೬ |
| ಮುಖದ ಚರ್ಮವು ಸ್ವಚ್ಛವಾಗುವುದಕ್ಕೆ | ೧೫೦ | ೭ |
| ಮುಖದ ಮೇಲಿನ ಕಲೆಗಳ ನಾಶಕ್ಕೆ .... | ೧೫೧ | ೮ |
| ಮುಖದ ಮಾಲಿನ್ಯವು ದೂರವಾಗಿ ಬಣ್ಣವು ಸ್ವಚ್ಛವಾಗುವುದಕ್ಕೆ ಕೆಲವು ಉತ್ತಮ ಪ್ರಯೋಗಗಳು | ೧೫೧ | ೯ |
| ಸುಗ್ಗೆ ಕಾಯಿ .... .... | ೧೫೩ | |
| ಗಂಡಮಾಲೆಗೆ .... .... | ೧೫೪ | ೧ |
| ಗಂಡಮಾಲೆ, ಇತರವಿಧ ಗಡ್ಡೆಗಳು, ಬಾವುಗಳು ಕರಗುವುದಕ್ಕೆ | ೧೫೪ | ೨, ೩, ೪ |
| ಆನೆಯ ಕಾಲಿನ ಹಾಗೆ ಕಾಲು ಬಾತಿರುವುದಕ್ಕೆ | ೧೫೪ | ೫ |
| ವಾಯು ಸಂಬಂಧವಾದ ಬಾವುಗಳಿಗೆ .... | ೧೫೪ | ೬ |
| ಏಟು ತಗಲಿದ್ದರೆ .... | ೧೫೫ | ೭ |
| ನವೆ, ಹುಳುಕಡ್ಡಿಗಳಿಗೆ .... | ೧೫೫ | ೮, ೯ |
| ಶೀತದ ತಲೆನೋವಿಗೆ .... .... | ೧೫೫ | ೧೦ |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ನಾರು ಹುಣ್ಣಿಗೆ ಉತ್ತಮ ಪ್ರಯೋಗ .... | ೧೫೫ | ೧೧ |
| ಬಿಕ್ಕಳಿಕೆಗೆ, ಉಬ್ಬಸಗಳಿಗೆ .... | ೧೫೫ | ೧೨ |
| ಮೂಲವ್ಯಾಧಿಯ ಮೊಳಕೆಗಳಿಗೆ .... | ೧೫೬ | ೧೩, ೧೪ |
| ವಿಷದ ವೇಗದಿಂದ ಪ್ರಜ್ಞೆಯು ತಪ್ಪಿದ್ದರೆ.... | ೧೫೬ | ೧೫ |
| ಮೂರ್ಛೆಗೆ (ಹಿಸ್ಟೀರಿಯಾ) .... | ೧೫೬ | ೧೬ |
| ಮೂಲರೋಗದ ಮೊಳಕೆಗಳಿಗೆ .... | ೧೫೬ | ೧೭, ೧೮ |
| ಹೊಟ್ಟೆಯಲ್ಲಿ ಜಂತುಗಳು ಸೇರಿದ್ದರೆ .... | ೧೫೭ | ೧೯ |
| ಬೆಂಡೆಯಕಾಯಿ .... .... | ೧೫೭ | |
| ಕೆಂಪು, ಬಿಳುಪು ಪ್ರದರಗಳಿಗೆ .... | ೧೫೮ | |
| ಗೋರೀಕಾಯಿ .... .... | ೧೫೮ | |
| ಚಪ್ಪರಹ ಅವರೆ .... .... | ೧೫೮ | |
| (ಗೋಭಿ ಅಥವಾ ಕಾಲಿ ಫ್ಲವರ್) ಹೂಕೋಸು, ಗಡ್ಡೆ ಕೋಸು | ೧೫೯ | |
| ಆಲೂಗಡ್ಡೆ .... .... | ೧೬೦ | |
| ಸಕಲವಿಧ ಬಾವುಗಳಿಗೆ, ಸುಟ್ಟ ಗಾಯಗಳಿಗೆ | ೧೬೦ | ೧ |
| ಸುಟ್ಟ ಗಾಯಗಳಿಗೆ ಕೆಲವು ಉತ್ತಮಸಲಹೆಗಳು | ೧೬೧ | |
| ಸಕಲವಿಧ ಗಾಯಗಳಿಗೆ ಆಯಿಂಟ್‌ಮೆಂಟ್ | ೧೬೨ | |
| ಸೂರಣದ ಗಡ್ಡೆ .... .... | ೧೬೨ | |
| ಮೂಲವ್ಯಾಧಿ, ಗುಲ್ಮ, ವಾತರೋಗ, ಕೆಮ್ಮು ದಮ್ಮು ಮತ್ತು ಸ್ತ್ರೀಯರ ಮಾಸಿಕದ ತಡೆಗೆ | ೧೬೩ | ೧ |
| ಚೇಳಿನವಿಷ ಮತ್ತು ಗಡ್ಡೆಗಳು ಪಕ್ವವಾಗುವುದಕ್ಕೆ | ೧೬೩ | ೨ |
| ಮೂಲರೋಗವು ನಿರ್ಮೂಲವಾಗುವುದಕ್ಕೆ | ೧೬೪ | ೩ |
| ಹೊಟ್ಟೆಯ ಶೋಭೆಗೆ .... .... | ೧೬೪ | ೪ |
| ಮೂಲವ್ಯಾಧಿ, ಸಕಲವಿಧ ಬಾವುಗಳು, ಆನೆಯ ಕಾಲು, ಸಂಗ್ರಹಣಿ, ಕೆಮ್ಮು, ಧಮ್ಮು, ಕ್ಷಯ, ಮೇಹವ್ಯಾಧಿ ಮೊದ ಲಾದುವುಗಳಿಗೆ | ೧೬೪ | ೫ |
| ಈರುಳ್ಳಿ .... .... | ೧೬೫ | |
| ಕಾಲಿನ ಹಿಮ್ಮಡಿಯು ಸೀಳಿದ್ದರೆ .... | ೧೬೬ | ೧ |
| ಸಾಂಕ್ರಾಮಿಕ ಕ್ರಿಮಿಗಳ ನಾಶಕ್ಕೆ .... | ೧೬೬ | ೨ |
| ಕಾಲರಾ ರೋಗಕ್ಕೆ ಉತ್ತಮ ಪ್ರಯೋಗಗಳು | ೧೬೬ | ೩, ೪, ೫ |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ಮೂಲವ್ಯಾಧಿಯ ಮೊಳಕೆಗಳಿಗೆ .... | ೧೬೮ | ೬ |
| ರಕ್ತಮೂಲ ವ್ಯಾಧಿಗೆ .... .... | ೧೬೮ | ೭ |
| ಚೇಳಿನ ವಿಷಕ್ಕೆ .... .... | ೧೬೮ | ೮ |
| ಮೂಲ ರೋಗಕ್ಕೆ .... .... | ೧೬೮ | ೯, ೧೦ |
| ವೀರ್ಯವರ್ಧಕ ಸುಲಭ ಪ್ರಯೋಗ | ೧೬೮ | ೧೧ |
| ಕಾಮಾಲೆಯ ನಿವಾರಣೆಗೆ .... | ೧೬೯ | ೧೨ |
| ಗೂರಲು ( ದಮ್ಮು ) ರೋಗಕ್ಕೆ .... | ೧೬೯ | ೧೩ |
| ಅರ್ಧತಲೆಯ ನೋವಿಗೆ .... | ೧೬೯ | ೧೪ |
| ಮಕ್ಕಳ ಎದೆಯೊಳಗೆ ಕಟ್ಟಿಕೊಂಡಿರುವ ಕಫವು ನೀರಾಗಿ ಹೊರಗೆ ಬರುವುದಕ್ಕೆ .... | ೧೬೯ | ೧೫ |
| ಕಿವಿಯ ನೋವಿಗೆ, ಕಿವಿಯು ಸೋರುವುದಕ್ಕೆ | ೧೭೦ | ೧೬ |
| ನಾರು ಹುಣ್ಣಿಗೆ ಉತ್ತಮ ಪ್ರಯೋಗ .... | ೧೭೦ | ೧೭ |
| ಮೂರ್ಛೆ ರೋಗಕ್ಕೆ .... | ೧೭೦ | ೧೮ |
| ಹೊಟ್ಟೆಯಲ್ಲಿ ಬೆಳೆದಿರುವ ಗಡ್ಡೆಗೆ .... | ೧೭೦ | ೧೯ |
| ಕಣ್ಣುಗಳ ಜ್ಯೋತಿ ವರ್ಧನೆಗೆ, ದುರ್ಮಾಂಸ ನಿವಾರಣೆಗೆ | ೧೭೦ | ೨೦ |
| ಕಣ್ಣಿನಲ್ಲಿ ಬಂದಿರುವ ಬಿಳಿಯ ಹೂವಿಗೆ | ೧೭೦ | ೨೧ |
| ವೀರ್ಯ ವರ್ಧಕ ಸುಲಭ ಪ್ರಯೋಗ | ೧೭೧ | ೨೨ |
| ಬೆಳ್ಳುಳ್ಳಿ .... .... .... | ೧೭೨ | |
| ಸಮಸ್ತ ವಾತರೋಗಗಳಿಗೆ .... | ೧೭೫ | ೧ |
| ಲಕ್ವಾ, ಕೀಲುವಾಯು, ಮುಂತಾದುವುಗಳಿಗೆ | ೧೭೫ | ೨ |
| ಲಕ್ವಾ, ಸಮಸ್ತವಿಧ ವಾತ ವಿಕಾರಗಳಿಗೆ | ೧೭೫ | ೩ |
| ಬಾಯಿ, ಕಣ್ಣು, ತುಟಿಗಳಿಗೆ ಲಕ್ವಾ ಹೊಡೆದಿದ್ದರೆ ಅದರ ನಿವಾರಣೆಗೆ .... | ೧೭೬ | ೪ |
| ಕಾಲರಾ ರೋಗದ ತಡೆಗೆ .... | ೧೭೬ | ೫ |
| ಗಂಧಕ ಶುದ್ಧಿ .... .... | ೧೭೭ | |
| ಮೂರ್ಛೆಗೆ .... .... | ೧೭೮ | ೬ |
| ಕೀಲುಗಳ ಬಾವು, ನೋವುಗಳಿಗೆ .... | ೧೭೮ | ೭ |
| ಕೂದಲುದುರಿ ಹೋಗಿರುವ ಕಡೆಯಲ್ಲಿ ಪುನಃ ಹುಟ್ಟುವುದಕ್ಕೆ | ೧೭೯ | ೮ |
| ಕಿವಿಯ ನೋವಿಗೆ .... .... | ೧೭೯ | ೯ |
| ಹೊಟ್ಟೆಯಲ್ಲಿ ಬೆಳೆದಿರುವ ಗಡ್ಡೆ ಕರಗುವುದಕ್ಕೆ | ೧೭೯ | ೧೦ |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ಮೂಲವ್ಯಾಧಿಯು ನಿರ್ಮೂಲವಾಗುವುದಕ್ಕೆ | ೧೮೦ | ೧೧ |
| ಚೇಳಿನ ವಿಷಕ್ಕೆ .... .... | ೧೮೦ | ೧೨ |
| ಲಕ್ವಾ ಮತ್ತು ಇತರವಿಧ ವಾತರೋಗಗಳಿಗೆ | ೧೮೦ | |
| ಮೂಲಂಗಿ .... .... | ೧೮೧ | |
| ಮೂಲವ್ಯಾಧಿಯ ಶಾಂತಿಗೆ .... | ೧೮೧ | ೧, ೨ |
| ಮೂತ್ರದ ತಡೆಗೆ .... .... | ೧೮೨ | ೩ |
| ಜಲೋಂಧರಕ್ಕೆ (ಹೊಟ್ಟೆಯಲ್ಲಿ ನೀರು ಸೇರಿರುವುದು) | ೧೮೨ | ೪ |
| ಶೀತದಿಂದುಂಟಾದ ಕಿವಿ ಸೋವಿಗೆ .... | ೧೮೨ | ೫ |
| ನವೆ, ತದ್ದು, ಗಜಕರ್ಣಗಳಿಗೆ (ಎಗ್ಜಿಮಾ) | ೧೮೨ | ೬,೭,೮,೯,೧೦ |
| ಸ್ತ್ರೀಯರ ಮಾಸಿಕ ಧರ್ಮದ ತಡೆಗೆ .... | ೧೮೩ | ೧೧ |
| ಕುಷ್ಠರೋಗದಿಂದ ಯಾವುದಾದರೊಂದಂಗವು ಕೊಳೆಯುತ್ತಿದ್ದರೆ | ೧೮೩ | ೧೨ |
| ಹುಳಕಡ್ಡಿ, ಗಜಕರ್ಣಗಳಿಗೆ .... | ೧೮೪ | ೧೩ |
| ಗಂಡಮಾಲೆ, ಗಲಗಂಡ, ಮತ್ತಿತರ ಗಡ್ಡೆಗಳಿಗೆ | ೧೮೪ | ೧೪ |
| ಕಾಲರಾ ರೋಗಕ್ಕೆ .... .... | ೧೮೪ | ೧೫ |
| ಕಿವಿಯಿಂದ ಕೀವು ಸೋರುತ್ತಿದ್ದರೆ .... | ೧೮೪ | ೧೬ |
| ಚೇಳಿನ ವಿಷದ ನಿವಾರಣೆಗೆ ಉತ್ತಮ ಪ್ರಯೋಗ | ೧೮೫-೮೯ | ೧ರಿಂದ ೧೩ |
| ಗಜ್ಜರಿ (ಕೆಂಪು ಮೂಲಂಗಿ) .... | ೧೯೦ | |
| ಮೂಲವ್ಯಾಧಿಗೆ, ಮೂಗು-ಬಾಯಿ-ಆಸನಗಳಿಂದ ಬೀಳುತ್ತಿರುವ ರಕ್ತವು ನಿಲ್ಲುವುದಕ್ಕೆ | ೧೯೦ | ೧ |
| ಹೃದಯಕ್ಕೆ ಬಲ ಬರುವುದಕ್ಕೆ, ಸಂಧಿವಾತ, ಮಲಬದ್ಧತೆಗಳ ನಿವಾರಣೆಗೆ .... | ೧೯೧ | ೨ |
| ಹೃದಯದ ದುರ್ಬಲತೆ, ಸಂಗ್ರಹಣಿ, ಸಂಧಿವಾತ, ಕೆಮ್ಮುಗಳಿಗೆ, ಬಲವೀರ್ಯಗಳ ವರ್ಧನಕ್ಕೆ .... .... | ೧೯೧ | ೩ |
| ಬಿಕ್ಕಳಿಕೆಗೆ .... .... | ೧೯೨ | ೪ |
| ಅರ್ಧತಲೆ ನೋವಿಗೆ .... .... | ೧೯೨ | ೫ |
| ಸ್ತ್ರೀಯರ ಮಾಸಿಕದ ತಡೆಗೆ .... | ೧೯೨ | ೬ |
| ತೆಂಗಿನಕಾಯಿ .... .... | ೧೯೨ | |
| ಬಲವೀರ್ಯ ವರ್ಧಕ ನಾರಿಕೇಳ ಪಾಕ | ೧೯೩ | ೧ |
| ಬಾವಿಗೆ, ಏಟುಬಿದ್ದಿರುವ ಭಾಗಕ್ಕೆ .... | ೧೯೩ | ೨ |

| ವಿಷಯ | | ಪುಟ | ಚಿಕಿತ್ಸೆಯ ನಂ. |
|---|---|---|---|
| ಹಿಮ್ಮಡಿಯು ಸೀಳಿರುವುದಕ್ಕೆ | .... | ೧೯೪ | ೩ |
| ಮಕ್ಕಳ ಬಿಕ್ಕಳಿಕೆಗೆ | .... | ೧೯೪ | ೪ |
| ಉಬ್ಬಸ, ಕೆಮ್ಮಲು, ಪರಿಣಾಮ ಶೂಲೆ, ಹುಳಿ ತೇಗುಗಳಿಗೆ, ಪುಂಸತ್ವ ವೃದ್ಧಿಗೆ | | ೧೯೪ | ೫ |
| ಬಿಕ್ಕಳಿಕೆಗೆ .... | .... | ೧೯೫ | ೬ |
| ಕಾಲರಾದ ವಾಂತಿ ಮತ್ತಿತರ ವಾಂತಿಗಳಿಗೆ | | ೧೯೫ | ೭ |
| ಸುಟ್ಟಗಾಯದ ಉರಿಯು ಕಡಿಮೆಯಾಗುವುದಕ್ಕೆ | | ೧೯೫ | ೮ |
| ಹಣ್ಣುಗಳು .... | .... | ೧೯೬ | |
| ಮಾವಿನಹಣ್ಣು .... | .... | ೨೦೧ | |
| ವಾಂತಿ, ಭೇದಿಗಳು ನಿಲ್ಲುವುದಕ್ಕೆ | .... | ೨೦೨ | ೧ |
| ಭೇದಿಯು ನಿಲ್ಲುವುದಕ್ಕೆ | .... | ೨೦೩ | ೨ |
| ಗರ್ಭಿಣಿಯರ ಅತಿಸಾರಕ್ಕೆ | .... | ೨೦೩ | ೩ |
| ಭೇದಿಯು ನಿಲ್ಲುವುದಕ್ಕೆ ಲೇಪ | .... | ೨೦೩ | ೪ |
| ಸಂಗ್ರಹಣಿ, ಕಾಮಾಲೆ, ಪ್ರಮೇಹ, ಅತಿಸಾರ ಹೊಟ್ಟೆಯಲ್ಲಿನ ಗಡ್ಡೆ, ಜ್ವರಗಳಿಗೆ | .... | ೨೦೩ | ೫ |
| ಸಂಗ್ರಹಣಿ–ಜ್ವರ ಸಹಿತವಾದ ಭೇದಿ, ರಕ್ತ ಭೇದಿಗಳಿಗೆ | | ೨೦೩ | ೬ |
| ವಾಂತಿ, ಅತಿಸಾರಗಳಿಗೆ | .... | ೨೦೩ | ೭ |
| ಹುಳಗಳಿಂದ ಕೂದಲು ಉದುರಿಹೋಗಿರುವುದಕ್ಕೆ | | ೨೦೪ | ೮ |
| ಕಣ್ಣುಗಳ ನೋವಿಗೆ .... | .... | ೨೦೪ | ೯ |
| ಕಿವಿಯು ಸೋರುವುದಕ್ಕೆ, ಹುಳಗಳು ಸಾಯುವುದಕ್ಕೆ | | ೨೦೪ | ೧೦, ೧೧ |
| ವಾಂತಿ, ಭೇದಿಗಳಿಗೆ .... | .... | ೨೦೪ | ೧೨ |
| ಅತಿಸಾರಕ್ಕೆ .... | .... | ೨೦೫ | ೧೩ |
| ಮೂಗಿನಿಂದ ರಕ್ತವು ಬೀಳುತ್ತಿದ್ದರೆ | .... | ೨೦೫ | ೧೪ |
| ಮಕ್ಕಳ ಭೇದಿ ನಿಲ್ಲುವುದಕ್ಕೆ | .... | ೨೦೫ | ೧೫ |
| ಚೇಳಿನ ವಿಷಕ್ಕೆ .... | .... | ೨೦೫ | ೧೬ |
| ಸಂಗ್ರಹಣಿ, ಅತಿಸಾರಗಳಿಗೆ | ... | ೨೦೫ | ೧೭ |
| ಮೂತ್ರನಾಳದ ವ್ರಣಕ್ಕೆ (ಗನೋರಿಯ) | | ೨೦೬ | ೧೮ |
| ಕೂದಲು ಕಪ್ಪಾಗುವುದಕ್ಕೆ | .... | ೨೦೬ | ೧೯, ೨೦ |
| ಶರೀರದ ಪೃಥತೆಗೆ, ಬಲ, ವರ್ಣಗಳ ವೃದ್ಧಿಗೆ | | ೨೦೬ | ೨೧ |
| ಸೇಬುಹಣ್ಣು .... | .... | ೨೦೭ | |
| ಲೀವರ್, ಕಣ್ಣು, ನರಗಳ ಅಶಕ್ತತೆಗೆ | .... | ೨೦೭ | |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ಸೇವಿನ ಟೀ ಮನಸ್ಸು ಇಂದ್ರಿಯಗಳ ದೌರ್ಬಲ್ಯಕ್ಕೆ | ೨೦೯ | |
| ದಾಳಿಂಬೆಹಣ್ಣು .... .... | ೨೧೦ | |
| ಒಣ ಕೆಮ್ಮಲಿಗೆ .... .... | ೨೧೧ | ೧ |
| ಸುಟ್ಟ ಗಾಯದ ಉರಿಯ ಶಾಂತಿಗೆ .... | ೨೧೧ | ೨ |
| ಕಣ್ಣುಗಳು ಬಹಳ ಕೆಂಪಾಗಿದ್ದರೆ .... | ೨೧೧ | ೩ |
| ಅರೋಚಕ, ಪೀನಸ, ಜ್ವರ, ಕೆಮ್ಮಲುಗಳಿಗೆ | ೨೧೧ | ೪ |
| ಆಹಾರದಲ್ಲಿನ ಅರುಚಿಗೆ, ಜಠರಾಗ್ನಿ ವೃದ್ಧಿಗೆ | ೨೧೧ | ೫ |
| ಮಕ್ಕಳ ಅತಿಸಾರಕ್ಕೆ .... .... | ೨೧೧ | ೬ |
| ರಕ್ತಭೇದಿಗೆ .... .... | ೨೧೨ | ೭ |
| ಬಿಕ್ಕಳಿಕೆಗೆ .... .... | ೨೧೨ | ೮ |
| ಮೂಗಿನಿಂದ ರಕ್ತವು ಬೀಳುತ್ತಿದ್ದರೆ .... | ೨೧೨ | ೯ |
| ಮಂಡಲದ ಹಾವಿನ ವಿಷಕ್ಕೆ .... | ೨೧೨ | ೧೦ |
| ಪ್ರಮೇಹ ನಾಶಕ್ಕೆ .... .... | ೨೧೨ | ೧೧ |
| ಉಷ್ಣದ ತಲೆನೋವಿಗೆ .... | ೨೧೨ | ೧೨ |
| ಸಕಲವಿಧ ಕೆಮ್ಮಲುಗಳಿಗೆ .... | ೨೧೩ | ೧೩ |
| ರಕ್ತಭೇದಿ, ಸಂಗ್ರಹಣಿ, ಮಂದಾಗ್ನಿಗಳಿಗೆ | ೨೧೩ | ೧೪ |
| ಕಿತ್ತಳೆಹಣ್ಣು .... .... | ೨೧೩ | |
| ಇನ್‌ಫ್ಲೂಎಂಜಾ, ಮಲೇರಿಯಾಗಳಿಗೆ .... | ೨೧೩ | |
| ದ್ರಾಕ್ಷೆ .... .... .... | ೨೧೫ | |
| ದ್ರಾಕ್ಷಿಯ ಟೀ .... .... | ೨೧೭ | |
| ಶೀತದ ನೆಗಡಿ, ಕೆಮ್ಮಲುಗಳಿಗೆ .... | ೨೧೮ | ೧ |
| ಪಿತ್ತ ಜ್ವರ, ಬಾಯಾರಿಕೆ, ಭ್ರಮೆ, ವಾಂತಿ, ಕೆಮ್ಮಲು, ಬಾಯಿ ಒಣಗುವುದು ಮುಂತಾದುವುಗಳಿಗೆ | ೨೧೮ | ೨ |
| ಸಕಲವಿಧ ಜ್ವರಗಳಿಗೆ .... .... | ೨೧೮ | ೩ |
| ಸಕಲವಿಧ ಕೆಮ್ಮಲುಗಳಿಗೆ .... | ೨೧೮ | ೪ |
| ಮೂತ್ರಕಟ್ಟು, ಮೂತ್ರದ ಹರಳು ಮುಂತಾದ ಮೂತ್ರ ವಿಕಾರಗಳಿಗೆ | ೨೧೯ | ೫, ೬, ೭ |
| ಬಾಳೆಯಹಣ್ಣು .... .... | ೨೧೯ | |
| ಸ್ತ್ರೀಯರ ಬಿಳುಪು ರೋಗಕ್ಕೆ .... | ೨೨೦ | ೧ |
| ವಾತ-ಪಿತ್ತಗಳ ಆಧಿಕ್ಯದಿಂದುಂಟಾದ ಕೆಮ್ಮಲಿಗೆ | ೨೨೧ | ೨ |
| ಬಹುದಿನದಕೆಮ್ಮಲು, ಎದೆನೋವು, ದಮ್ಮುಗಳಿಗೆ | ೨೨೨ | ೩ |

| ವಿಷಯ | ಪುಟ | ಚಿಕಿತ್ಸೆಯ ಸಂ. |
| --- | --- | --- |
| ಶ್ಲೇಷ್ಮವು ಹೆಚ್ಚಾಗಿ ಬರುತ್ತಿರುವ ಕೆಮ್ಮಲಿಗೆ | ೨೨೧ | ೪ |
| ಸುಟ್ಟ ಗಾಯಕ್ಕೆ .... .... | ೨೨೨ | ೫ |
| ಉಬ್ಬಸಕ್ಕೆ .... .... | ೨೨೩ | ೬, ೭ |
| ಬಿಕ್ಕಳಿಕೆಗೆ .... .... | ೨೨೩ | ೮ |
| ಹಾವಿನ ವಿಷಕ್ಕೆ ಅತ್ಯುತ್ತಮ ಚಿಕಿತ್ಸೆ .... | ೨೨೩ | ೯ |
| ಸಕಲವಿಧ ಮೇಹಗಳಿಗೆ .... | ೨೨೪ | ೧೦ |
| ಸ್ತ್ರೀಯರ ಬಿಳಪು, ಕೆಂಪು ಪ್ರದರಗಳಿಗೆ .... | ೨೨೪ | ೧೧ |
| ಅಂಜೂರಹಣ್ಣು .... .... | ೨೨೪ | |
| ಸ್ತ್ರೀಯರ ಪ್ರದರ ರೋಗಕ್ಕೆ .... | ೨೨೪ | |
| ಉಷ್ಣದ ಕೆಮ್ಮಲಿಗೆ .... .... | ೨೨೫ | ೧ |
| ಭೇದಿಯ ಮೂಲಕ ನೆಗಡಿಯ ನಿವಾರಣೆಗೆ ಮತ್ತು ಮಲಬದ್ಧತೆಗೆ | ೨೨೫ | ೨ |
| ಎಲಚಿ (ಬೋರೆ) ಹಣ್ಣು .... .... | ೨೨೬ | |
| ಎಲಚಿಯ ಕಷಾಯ, ನರಮಂಡಲದ ಸುಧಾರಣೆಗೆ | ೨೨೭ | ೧ |
| ನೆಗಡಿ, ಕೆಮ್ಮಲಿಗೆ ಎಲಚಿಯ ಹಣ್ಣಿನ ರಸವನ್ನು ತೆಗೆಯುವ ರೀತಿ | ೨೨೭ | ೨ |
| ಮೂಲವ್ಯಾಧಿಗೆ ಎಲಚಿ ಎಲೆಯ ಪೋಲ್ಟೀಸ್ | ೨೨೭ | ೩ |
| ಮಡಿಮೆಗಳಿಗೆ .... .... | ೨೨೮ | ೪, ೫ |
| ಅಂಗೈ ಅಂಗಾಲುಗಳು ಬೆವೆಯುವುದಕ್ಕೆ | ೨೨೮ | ೬ |
| ಸುಟ್ಟ ಗಾಯವು ಮಾಯುವುದಕ್ಕೆ .... | ೨೨೮ | ೭ |
| ಬಿಕ್ಕಳಿಕೆಗೆ .... .... | ೨೨೮ | ೮ |
| ಕೂದಲು ಉದ್ದವಾಗಿ ಬೆಳೆಯುವುದಕ್ಕೆ .... | ೨೨೮ | ೯, ೧೦, ೧೧ |
| ಬಿಳಿಯ ಕೂದಲು ಕಪ್ಪಾಗುವುದಕ್ಕೆ .... | ೨೨೯ | ೧೨ |
| ಹಳೆಯ ವಾಂತಿ ರೋಗಕ್ಕೆ .... | ೨೨೯ | ೧೩ |
| ಖರ್ಜೂರ .... .... | ೨೨೯ | |
| ಮಕ್ಕಳು ಬಲಶಾಲಿಗಳಾಗುವುದಕ್ಕೆ ಖರ್ಜೂರದ ಶರಬತ್ತು (ಟಾನಿಕ್) | ೨೩೦ | ೧ |
| ವಿಶೇಷ ಬಲವರ್ಧನಕ್ಕೆ .... | ೨೩೦ | ೨ |
| ಅತ್ಯುಷ್ಣದ ಕೆಮ್ಮಲಿಗೆ .... | ೨೩೧ | ೩ |
| ಅಸಾಧ್ಯವಾದ ಅತಿಸಾರಕ್ಕೆ .... | ೨೩೧ | ೪ |
| ಮೂಲವ್ಯಾಧಿಯ ನಿವಾರಣೆಗೆ .... | ೨೩೧ | ೫ |

| ವಿಷಯ | ಪುಟ | ಚಿಕಿತ್ಸೆಯ ಸಂ. |
|---|---|---|
| ಮೂಲವ್ಯಾಧಿಯ ಮೊಳಕೆಗಳಿಗೆ .... | ೨೩೨ | ೬ |
| ಹೊಟ್ಟೆಯಲ್ಲಿ ಬಹಳ ಜಂತುಗಳಿದ್ದರೆ .... | ೨೩೨ | ೭ |
| ಮಲಕೋಶದಲ್ಲಿ ಸೇರಿರುವ ಕೃಮಿಗಳ ನಾಶಕ್ಕೆ | ೨೩೨ | ೮ |
| ಸಕಲವಿಧ ಪ್ರದರಗಳಿಗೆ .... | ೨೩೨ | ೯ |
| ಮೂಲರೋಗದ ಮೊಳೆಗಳು ನಾಶವಾಗುವುದಕ್ಕೆ | ೨೩೨ | ೧೦, ೧೧ |
| ಸ್ತ್ರೀಯರ ಗರ್ಭವು ನಿಲ್ಲುವುದಕ್ಕೆ .... | ೨೩೩ | ೧೨ |
| ಬೇಲದಹಣ್ಣು .... .... | ೨೩೩ | |
| ಅತಿ ಹೆಚ್ಚಾಗಿರುವ ಪಿತ್ತದ ಶಾಂತಿಗೆ .... | ೨೩೪ | ೧ |
| ಅತಿಸಾರಕ್ಕೆ .... .... | ೨೩೪ | ೨ |
| ಶರೀರದ ಅತ್ಯುಷ್ಣತೆಯ ಶಾಂತಿಗೆ, ವೀರ್ಯ ಪುಷ್ಟಿಗೆ | ೨೩೪ | ೩ |
| ಪ್ರಮೇಹಕ್ಕೆ, ಉಬ್ಬಸಕ್ಕೆ .... | ೨೩೪ | ೪, ೫ |
| ನೇರಳೆ ಹಣ್ಣು .... .... | ೨೩೫ | |
| ವಾಂತಿಗೆ .... .... | ೨೩೫ | ೧ |
| ವಾಂತಿ, ಅತಿಸಾರ, ಬಾಯಾರಿಕೆಗಳಿಗೆ .... | ೨೩೫ | ೨ |
| ಗೂದೆಯು ಹೊರಗೆ ಹೊರಬಿದ್ದಿದ್ದರೆ .... | ೨೩೬ | ೩ |
| ಬಹಳ ಸಾರಿ ಆಗುತ್ತಿರುವ ಭೇದಿಗೆ .... | ೨೩೬ | ೪ |
| ಶರೀರದ ದುರ್ವಾಸನೆಗೆ .... .... | ೨೩೬ | ೫,೬ |
| ಮೂಲರೋಗಕ್ಕೆ .... .... | ೨೩೬ | ೭ |
| ಸರ್ಪ ಹುಚ್ಚು ನಾಯಿಗಳ ವಿಷಕ್ಕೆ .... | ೨೩೬ | ೮ |
| ಸುಟ್ಟ ಗಾಯವು ಗುಣವಾದ ಮೇಲೆ ಕಲೆಯು ಹೋಗುವುದಕ್ಕೆ .. | ೨೩೭ | ೯ |
| ಅತ್ತಿಯ ಹಣ್ಣು .... .... | ೨೪೭ | |
| ಮೂಗು, ಬಾಯಿ, ಮೂತ್ರ-ಮಲದ್ವಾರಗಳಿಂದ ರಕ್ತವು ಬೀಳುತ್ತಿದ್ದರೆ .... | ೨೩೭ | ೧ |
| ಶ್ವಾಸ ರೋಗ (ಉಬ್ಬಸ)ಕ್ಕೆ .... | ೨೩೭ | ೨ |
| ವೀರ್ಯ ಸಂಬಂಧವಾದ ರೋಗಕ್ಕೆ .... | ೨೩೭ | ೩ |
| ಅಸಾಧ್ಯ ಪ್ರದರ ರೋಗಕ್ಕೆ .... | ೨೩೮ | ೪,೫ |
| ಗರ್ಭಿಣಿಯರ ಗರ್ಭಸ್ರಾವ, ಗರ್ಭಪಾತಗಳಿಗೆ | ೨೩೮ | ೬ |
| ಕಲ್ಲಿನಂತೆ ಗಟ್ಟಿಯಾಗಿರುವ ಗಡ್ಡೆ ಬಾವುಗಳಿಗೆ | ೨೩೮ | ೭ |
| ಭಗಂದರಕ್ಕೆ .... .... | ೨೩೮ | ೮ |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ವೀರ್ಯದೋಷ ನಿವಾರಣೆಗೆ, ರತಿಶಕ್ತಿ ವರ್ಧನಕ್ಕೆ | ೨೩೯ | ೯ |
| ಭೇದಿಯು ನಿಲ್ಲುವುದಕ್ಕೆ .... | ೨೩೯ | ೧೦ |
| ಎದೆಯುರಿ, ಮೂತ್ರದುರಿ, ಪ್ರಮೇಹಗಳಿಗೆ | ೨೩೯ | ೧೧ |
| ನೀರಾಗಿರುವ ವೀರ್ಯವು ಗಟ್ಟಿಯಾಗುವುದಕ್ಕೆ | ೨೩೯ | ೧೨ |
| ಸಿಂಬೆಹಣ್ಣು .... .... | ೨೩೯ | |
| ದಣುವು, ಬಾಯಾರಿಕೆಗೆ ವಾಕರಿಕೆಗಳಿಗೆ | ೨೪೧ | ೧ |
| ರಾತ್ರಿಯಲ್ಲಿ ಕಣ್ಣು ಕಾಣಿಸದಿದ್ದರೆ, ಕಣ್ಣಿನ ಜ್ಯೋತಿಯು ಕಡಿಮೆಯಾಗಿದ್ದರೆ | ೨೪೧ | ೨ |
| ಸಕಲವಿಧ ಉದರ ರೋಗಗಳಿಗೆ .... | ೨೪೧ | ೩ |
| ಮೂಗಿನಿಂದ ರಕ್ತವು ಬೀಳುತ್ತಿದ್ದರೆ .... | ೨೪೨ | ೪ |
| ಅತಿಸಾರಕ್ಕೆ .... .... | ೨೪೨ | ೫ |
| ಕಣ್ಣಿನಲ್ಲಿ ಬೆಳೆದಿರುವ ದುರ್ಮಾಂಸಕ್ಕೆ .... | ೨೪೩ | ೬ |
| ಬಿಕ್ಕಳಿಕೆಗೆ .... .... | ೨೪೩ | ೭ |
| ಚೇಳಿನ ವಿಷಕ್ಕೆ .... .... | ೨೪೩ | ೮ |
| ಸರ್ಪದ ವಿಷಕ್ಕೆ ಕೆಲವು ಅತ್ಯುತ್ತಮ ಪ್ರಯೋಗ | ೨೪೩–೪೬ | |
| ಹಲಸಿನಹಣ್ಣು .... .... | ೨೪೭ | |
| ಸೀಬೆಹಣ್ಣು .... .... | ೨೪೭ | |
| ನೆಗಡಿ, ಕೆಮ್ಮುಲುಗಳಿಗೆ .... | ೨೪೮ | ೧ |
| ಕಣ್ಣುರಿಯ ಶಾಂತಿಗೆ .... .... | ೨೪೮ | ೨ |
| ಪಿತ್ತದ ವಿಕಾರ, ಹೊಟ್ಟೆಯುರಿ, ಬಾಯಾರಿಕೆಗಳಿಗೆ | ೨೪೮ | ೩ |
| ಪಿತ್ತದ ಗಂದೆ, ನವೆಗಳಿಗೆ .... | ೨೪೯ | ೪ |
| ಸೀತಾಫಲ .... .... | ೨೪೯ | |
| ಗಡ್ಡೆ, ಕುರಗಳು ಬೇಗ ಒಡೆಯುವುದಕ್ಕೆ | ೨೪೯ | ೧ |
| ಪಿತ್ತದ ಗಂದೆ ನವೆಗೆ .... .... | ೨೪೯ | ೨ |
| ಹೊಟ್ಟೆಯೊಳಗಿನ ಜಂತುಗಳು ಬೀಳುವುದಕ್ಕೆ | ೨೫೦ | ೩ |
| ಗೂಡಯು ಹೊರಟಿರುವುದಕ್ಕೆ .... | ೨೫೦ | ೪ |
| ನಾರು ಹುಣ್ಣಿಗೆ .... .... | ೨೫೦ | ೫ |
| ನಾನಾವಿಧ ಹುಣ್ಣುಗಳಿಗೆ .... | ೨೫೦ | ೬ |
| ದನಗಳ ಹುಣ್ಣುಗಳು ಮಾಯುವುದಕ್ಕೆ .... | ೨೫೦ | ೭ |

| ವಿಷಯ | ಪುಟ | ಚಿಕಿತ್ಸೆಯ ಸಂ. |
|---|---|---|
| ಜ್ವರ, ದಮ್ಮು ಮತ್ತು ಇಂದ್ರಿಯಗಳ ಬಲ ವರ್ಧನಕ್ಕೆ | ೨೫೦ | ೮ |
| ಗಡ್ಡೆ, ಕುರುಗಳು ಬೇಗನೆ ಒಡೆಯುವುದಕ್ಕೆ | ೨೫೧ | ೯ |
| ಮೂರ್ಛೆಗೆ (ಹಿಸ್ಟೀರಿಯಾ) .... | ೨೫೧ | ೧೦ |
| ದನಗಳು ಹಾಯುವುದರಿಂದ ಆದ ಗಾಯಗಳು ಮಾಯುವುದಕ್ಕೆ | ೨೫೧ | ೧೧ |
| ಹುಣಸೆಹಣ್ಣು .... .... | ೨೫೧ | |
| ಹೊಟ್ಟೆನೋವು, ವಾಂತಿ, ಭೇದಿ ಬಾಯಾರಿಕೆಗಳಿಗೆ | ೨೫೨ | ೧ |
| ಕಣ್ಣುಗಳ ನೋವಿಗೆ .... .... | ೨೫೩ | ೨ |
| ಉಷ್ಣದ ತಲೆನೋವಿಗೆ .... | ೨೫೩ | ೩ |
| ಗೇರು ತಗಲಿದ್ದರೆ .... .... | ೨೫೩ | ೪ |
| ಅಫೀಮಿನ ವಿಷ ನಿವಾರಣೆಗೆ .... | ೨೫೩ | ೫ |
| ಆಹಾರದಲ್ಲಿನ ಅರುಚಿಗೆ .... | ೨೫೩ | ೬ |
| ಎಲಬು ಮುರಿದು ನೋವಾಗಿದ್ದರೆ .... | ೨೫೪ | ೭, ೮ |
| ಕಣ್ಣಿನ ಮುಂದೆ ಕತ್ತಲು ಕವಿಯುತ್ತಿದ್ದರೆ | ೨೫೪ | ೯ |
| ಗೇರಿನ ತೊಂದರೆಗೆ .... .... | ೨೫೪ | ೧೦ |
| ಎಲ್ಲಾ ವಿಧದ ಕೆಮ್ಮಲುಗಳಿಗೆ .... | ೨೫೪ | ೧೧ |
| ಚೇಳಿನ ವಿಷಕ್ಕೆ .... .... | ೨೫೪ | ೧೨ |
| ಕಣ್ಣಿನಲ್ಲಿ ಬೆಳೆದಿರುವ ಮುತ್ತಿನಾಕಾರದ ಬಿಂದುವಿಗೆ | ೨೫೫ | ೧೩ |
| ದೃಷ್ಟಿಮಾಂದ್ಯ, ಹುಳಕಡ್ಡಿಗೆ .... | ೨೫೫ | ೧೪ |
| ಕಣ್ಣಿನ ಮುಂದೆ ಪರದೆ ಬಿದ್ದಂತಾಗುವುದಕ್ಕೆ | ೨೫೫ | ೧೫ |
| ಶೀಘ್ರಪತನಕ್ಕೆ, ವೀರ್ಯವು ನೀರಾಗಿರುವುದಕ್ಕೆ | ೨೫೫ | ೧೬ |
| ಅತಿಸಾರಕ್ಕೆ .... .... | ೨೫೬ | ೧೭ |
| ಸುಟ್ಟ ಗಾಯಕ್ಕೆ .... .... | ೨೫೬ | ೧೮, ೧೯ |
| ಪರಂಗಿಹಣ್ಣು .... .... | ೨೫೬ | |
| ಖರ್ಜೂರಹಣ್ಣು .... .... | ೨೫೮ | |
| ಕಲ್ಲಂಗಡಿಹಣ್ಣು .... .... | ೨೬೦ | |
| ಮಾದಲಹಣ್ಣು .... .... | ೨೬೧ | |

| ವಿಷಯ | ಪುಟ | ಚಿಕಿತ್ಸೆಯ ನಂ. |
|---|---|---|
| ಹೊಟ್ಟೆಯಲ್ಲಿ ಬೆಳೆದಿರುವ ಗಡ್ಡೆಗೆ (ಸ್ಪ್ಲೀನ್) | ೨೬೨ | ೧ |
| ಅಜೀರ್ಣ, ಮಂದಾಗ್ನಿ, ಪಿತ್ತವಿಕಾರಗಳಿಗೆ | ೨೬೨ | ೨ |
| ಹಲ್ಲುನೋವು, ಹುಳುಗಳು ಸಾಯುವುದಕ್ಕೆ | ೨೬೨ | ೩ |
| ಚೇಳಿನ ವಿಷಕ್ಕೆ .... .... | ೨೬೩ | ೪, ೫ : |
| ಚಕ್ಕೋತಹಣ್ಣು .... .... | ೨೬೩ | |
| ಅನಾನಸ್ .... .... | ೨೬೩ | |
| ಟೊಮೊಟೋಹಣ್ಣು .... .... | ೨೬೬ | |
| ಹಾಲು .... .... .... | ೨೬೭ | |
| ಹಾಲಿನ ವಿವಿಧತೆ, ಹಾಲಿನಿಂದ ರೋಗನಾಶ, ಹಾಲಿನ ನಾನಾವಿಧ ಉಪಯೋಗದಿಂದ ಅನೇಕ ರೋಗಗಳ ನಿವಾರಣೆ, ಹಾಲಿನ ವಿವಿಧ ಚಿಕಿತ್ಸೆಗಳು, ಉತ್ತಮ ಸಲಹೆಗಳು | ೨೬೯, ೨೭೪ | |
| ಮೊಸರು .... .... | ೨೭೫ | |
| ಮೊಸರಿನ ವಿವಿಧತೆ, ಮೊಸರಿನಿಂದ ರೋಗಗಳ ನಿವಾರಣೆ, ಮೊಸರನ್ನು ಸೇವಿಸುವುದಕ್ಕೆ ನಿಯಮಗಳು | ೨೭೫–೨೭೮ | |
| ಮಜ್ಜಿಗೆ .... .... | ೨೭೮ | |
| ಮಜ್ಜಿಗೆಯ ವಿವಿಧತೆ, ಅನೇಕ ರೋಗಗಳ ನಿವಾರಣೆಗಾಗಿ ಮಜ್ಜಿಗೆಯ ನಾನಾವಿಧ ಉಪಯೋಗಗಳು | ೨೭೮–೨೮೧ | |
| ಬೆಣ್ಣೆ .... .... .... | ೨೮೨ | |
| ತುಪ್ಪ .... .... .... | ೨೮೨ | |
| ತುಪ್ಪದ ವಿಶೇಷಗುಣಗಳು, ತುಪ್ಪದ ನಾನಾವಿಧ ಉಪಯೋಗದಿಂದ ಅನೇಕ ರೋಗಗಳ ನಿವಾರಣೆ, ಹಳೆಯ ತುಪ್ಪದ ಉಪಯೋಗಗಳು | ೨೮೨–೨೮೬ | |
| ನೀರು .... .... .... | ೨೮೨ | |

| ವಿಷಯ | ಪುಟ | ಚಿಕಿತ್ಸೆಯ ನಂ. |
| --- | --- | --- |
| ನೀರಿನ ವಿವಿಧತೆ, ನೀರಿನ ಸಂಬಂಧವಾದ ಉಪಯುಕ್ತ ವಿಷಯಗಳು | ೨೮೭–೨೯೧ | |
| ಶುದ್ಧವಾಯು .... .... | ೨೯೧ | |
| ಶುದ್ಧವಾಯುವಿನ ಆವಶ್ಯಕತೆ, ಶುದ್ಧವಾಯುವಿನ ಉಪಯೋಗ, ಶುದ್ಧವಾಯು ಸೇವನೆ | ೨೯೩–೨೯೫ | |
| ನಿದ್ರೆ .... .... .... | ೨೯೫ | |
| ನಿದ್ರೆಯ ವಿವಿಧತೆ, ನಿದ್ರೆಯ ವಿವೇಚನೆ, ನಿದ್ರೆಯ ಅನೇಕ ಉಪಯುಕ್ತ ನಿಯಮಗಳು | ೨೯೮–೩೦೧ | |
| ಉಷಃಪಾನ .... .... | ೩೦೧ | |
| ಉಷಃಕಾಲದಲ್ಲಿ ಜಾಗರಣೆ, ಉಷಃಪಾನದ ಗುಣ | ೩೦೧ | |
| ಉಷಃಪಾನದಿಂದ ರೋಗನಾಶ ಆಯುರಾರೋಗ್ಯಗಳನ್ನುಂಟು ಮಾಡತಕ್ಕ ಆಯುರ್ವೇದದ ಹಿತೋಪದೇಶ | ೩೦೧–೩೦೪ | |


— ಗ್ರಂಥ ಸಮಾಪ್ತಿ —



ಶ್ರೀ ವಿಶ್ವೇಶ್ವರಃ ಶರಣಮ್.

# ಆರೋಗ್ಯ ದರ್ಪಣ

ಅಪ್ರತ್ಯಕ್ಷಫಲಾಃ ಪ್ರಮಾಣವಿಕಲಾ ವಾಗ್ವಿಸ್ತರೈರಾಕುಲಾ ।
ವೇದಾಃ ಪ್ರಾಪ್ತಪದಾ ಯದಾಪ್ತವಚನಪ್ರಾಮಾಣ್ಯಸಾಮಾನ್ಯತಃ ।
ಪ್ರತ್ಯಕ್ಷೈಕಫಲಂ ತ್ರಿಸೂತ್ರಮಮಲಂ ಸ್ವಸ್ಥಾತುರಾಣಾಂ ಹಿತಂ
ತಂ ವಿದ್ಯಾಸ್ವಖಿಲಾಸು ಸತ್ತಮಮಹಂ ವೇದಂ ಭಜಾಮ್ಯಾಯುಷಃ ॥

ಪ್ರಪಂಚದಲ್ಲಿ ಜೀವಧಾರಣೆಯನ್ನು ಮಾಡಿದ ಸಕಲ ಪ್ರಾಣಿ ಸಮುದಾಯವು ನಿರಂತರವಲ್ಲಿ ಸುಖವನ್ನೇ ಇಚ್ಛಿಸುವುದಲ್ಲದೆ ದುಃಖವನ್ನು ಸ್ವಪ್ನದಲ್ಲಿಯಾದರೂ ಅನುಭವಿಸಲಿಚ್ಛಿಸುವುದಿಲ್ಲ. ಇದು ಪ್ರಾಣಿಮಾತ್ರದ ಸ್ವಾಭಾವಿಕಗುಣವಾಗಿದೆ. ಅದರಲ್ಲಿಯೂ ಜ್ಞಾನ ಪ್ರಧಾನವಾದ ಶ್ರೇಷ್ಠ ಮಾನವ ಜನ್ಮವನ್ನುಹೊಂದಿದ ಪ್ರಾಣಿಗಳಂತೂ ತಮ್ಮ ಜೀವನವನ್ನು ನಾನಾವಿಧ ಸುಖಗಳ ನಿಧಿಯನ್ನಾಗಿ ಮಾಡಿಕೊಳ್ಳಲೋಸುಗ ಹಗಲಿರುಳು ನಾನಾ ವಿಧಗಳಾದ ಉಪಾಯಗಳನ್ನು ಚಿಂತಿಸುತ್ತ ತಮ್ಮ ಸಮಸ್ತ ಜೀವಿತ ಸಮಯವನ್ನು ಅಂತಹ ಉಪಾಯಗಳನ್ನು ಹುಡುಕುವುದರಲ್ಲಿಯೇ ವಿನಿಯೋಗಿಸುತ್ತಿರುವುದನ್ನು ಪ್ರತಿದಿನದಲ್ಲಿ ನೋಡುತ್ತಲೂ ಕೇಳುತ್ತಲೂ ಇರುವುದಾಗಿದೆ.

ಜಗದ್ರಕ್ಷಕನಾದ ಪರಮೇಶ್ವರನು ಮಾನವ ಪ್ರಾಣಿಗಳ ಚಿಂತೆಯನ್ನು ದೂರಮಾಡುವುದಕ್ಕಾಗಿಯೇ ವಿದ್ಯೆ, ಧನ, ಪ್ರಭುತ್ವ, ಭೂಮಿ ಮೊದಲಾದ ಅನೇಕ ವಿಧ ಸಂಪತ್ತುಗಳನ್ನು ನಿರ್ಮಿಸಿರುವನು. ಈ ಸಂಪತ್ತುಗಳು ಅವರವರ ಪೂರ್ವಾರ್ಜಿತ ಸುಕೃತ ವಿಶೇಷದ ಪ್ರಭಾವದಿಂದ ಹೊಂದಲ್ಪಟ್ಟವುಗಳಾಗಿ ಮನುಷ್ಯಜೀವನವನ್ನು ಸುಖಮಯವನ್ನಾಗಿ ಮಾಡಲು ಅದ್ಭುತ ಶಕ್ತಿಸಂಪನ್ನಗಳಾಗಿರುತ್ತವೆ. ಮಾನವರ ಕೀರ್ತಿಪ್ರತಿಷ್ಠೆಗಳಿಗೆ ಈ ಸಂಪತ್ತುಗಳೇ ಕಾರಣವಾಗಿರುವುವೆಂಬ

ವಿಷಯುವು ಸರ್ವಾನುಭವಸಿದ್ಧವಾಗಿರುತ್ತದೆ. ಇಹಲೋಕ ಪರಲೋಕ ಸುಖಗಳಿಗಾದರೂ ಈ ಸಂಪತ್ತುಗಳೇ ಕಾರಣವಾಗಿರುತ್ತವೆಂಬುದನ್ನು ಸಕಲ ಶಾಸ್ತ್ರಗಳೂ ಸಿದ್ಧಗೊಳಿಸುತ್ತವೆ. ಆದರೆ ಈ ನಾನಾವಿಧ ಸಂಪತ್ತುಗಳಿಂದ ವಿಭೂಷಿತರಾದವರೆಲ್ಲರೂ ಸುಖಿಗಳಾಗುವರೆ ? ಎಂಬ ವಿಷಯವೇ ಅತಿ ಗಂಭೀರವೂ ವಿಚಾರಣೀಯುವೂ ಆಗಿರುತ್ತದೆ.

ಲೋಕದಲ್ಲಿ ಮನುಷ್ಯನು ಸಂಪತ್ತಿನಿಂದೊಡಗೂಡಿದ ಮಾತ್ರಕ್ಕೇ ಸುಖಿಯಾಗುವನೆಂಬ ಮಾತು ಸ್ವಪ್ನಪ್ರಾಯವಾಗಿದೆ. ಮನುಷ್ಯನಲ್ಲಿ ಯಾವ ಸಂಪತ್ತಾದರೂ ಇರಲಿ ಜೀವನದ ಮುಖ್ಯ ಸಾರಭೂತವಾದ ಆರೋಗ್ಯಭಾಗ್ಯವೊಂದಿಲ್ಲದಿದ್ದರೆ ಆ ಸಂಪತ್ತು ಜನ ಸಂಚಾರವೇ ಇಲ್ಲದ ಘೋರಾರಣ್ಯದಲ್ಲಿ ಬಿದ್ದ ತರತ್ಕಾಲದ ಪೂರ್ಣ ಚಂದ್ರನ ಶೀತಲಕಿರಣದಂತೆ ನಿರರ್ಥಕವಾಗುತ್ತದೆ.

ಆರೋಗ್ಯಭಂಡಾರದಿಂದ ರಹಿತನಾದವನು ಸಕಲ ವಿದ್ಯಾ ಪಾರಾವಾರ ಪಾರಂಗತನಾಗಿ ಲೋಕೋತ್ತರ ಪಾಂಡಿತ್ಯ ಮಂಡಿತ ನಾಗಿದ್ದರೂ, ನವಖಂಡ ಪೃಥ್ವಿಯನ್ನಾಳುವಂತಹ ಸಾರ್ವಭೌಮ ನಾಗಿದ್ದರೂ, ಅವನ ಪಾಂಡಿತ್ಯವೂ ಅವನ ಪ್ರತಿಭೆಯೂ ಅವನ ಪ್ರಭುತ್ವವೂ ಅವನ ಅಸಾಧಾರಣ ಸುಖಸಾಮಗ್ರಿಗಳೂ ಮರುಭೂಮಿ ಯಲ್ಲಿ ಬಿದ್ದ ಮಳೆಯಂತೆ ವ್ಯರ್ಥವಾಗುವುವು.

ನವದ್ವಾರಗಳಿಂದ ಅತಿಸುಂದರವಾದ ಶರೀರಮಂದಿರಕ್ಕೆ ಆಧಾರ ಭೂತವಾಗಿರುವ ಆರೋಗ್ಯವೆಂಬ ತಳಹದಿಯು ಸಡಿಲವಾದರಾಯಿತು! ಮಂದಿರದ ಶೋಭೆಯನ್ನು ವರ್ಧಿಸುತ್ತಲಿರುವ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬ ಮಂದಿರದ ಸಾಮಗ್ರಿಗಳು ಶಿಥಿಲವಾಗಿ ತಾವಾ ಗಿಯೇ ಉರುಳಿ ಬೀಳುವಂತಾಗುವುವು. ಇಂತಹ ಮುರುಕು ಮನೆ ಯಲ್ಲಿ ವಾಸಿಸಲು ಜುಗುಪ್ಸಿತನಾಗಿ ಮಂದಿರಾಧ್ಯಕ್ಷನಾದ ಜೀವಾತ್ಮನು ಸರ್ವಾಂಗಸುಂದರವಾದ ಮತ್ತೊಂದು ಹೊಸ ಮನೆಯನ್ನು ಹುಡುಕಿ ಕೊಳ್ಳುತ್ತಾನೆ.

ಆರೋಗ್ಯವೆಂಬ ಅನರ್ಘ್ಯ ಮಾಣಿಕ್ಯವನ್ನೊಂದುಸಲ ಕಳೆದು ಕೊಂಡ ಮೇಲೆ ಅದು ಪುನಃ ಸಿಗುವದು ಅಸಂಭವದ ಮಾತಾಗಿದೆ.

ವೈದ್ಯರು ಕಾಶಿಯಲ್ಲಿ ನನಗೆ ಹೇಳಿದ್ದರು. ಅದರಂತೆಯೇ ಕೆಲವರಿಂದ ಮಾಡಿಸಲಾಗಿ ವಿಶೇಷ ಪ್ರಯೋಜನವುಂಟಾಯಿತು.

೧. ಐದುಸೇರು ಕರಿಯ ಗೇರನ್ನು ತಂದು ಕುಟ್ಟಬೇಕು, ಅದನ್ನು ಕೆಂಪುಮಣ್ಣಿನೊಡನೆ ಕೂಡಿಸಿ ಉತ್ತಮವಾದ ಭೂಮಿಯಲ್ಲಿ ಗೊಬ್ಬರದಂತೆ ಹಾಕಬೇಕು, ಆ ಭೂಮಿಯಲ್ಲಿ ಮೆಂತ್ಯವನ್ನು ಬಿತ್ತಿ ನಿತ್ಯದಲ್ಲಿ ನೀರನ್ನು ಹಾಕುತ್ತಿರಬೇಕು, ಸೊಪ್ಪು ಚೆನ್ನಾಗಿ ಬೆಳೆದ ನಂತರ ಅದನ್ನು ಕಿತ್ತು ಪ್ರತಿ ದಿನವೂ, ಹಬೆಯಲ್ಲಿ ಬೇಯಿಸಿ ಉಪ್ಪು ಮತ್ತು ಮೆಣಸಿನ ಪುಡಿಯನ್ನುಹಾಕಿ ತಿನ್ನಬೇಕು. ಬೇಕಾದರೆ ಹೆಸರು ಬೇಳೆಯೊಡನೆ ಹಾಕಿ ಬೇಯಿಸಿ ಸೇವಿಸಬಹುದು ಮತ್ತು ರುಚಿಗಾಗಿ ಬೇಕಾದರೆ ಕಾರ ಮುಂತಾದುವುಗಳ ಸಂಕ್ಷಿಪ್ತ ಸಂಸ್ಕಾರವನ್ನು ಮಾಡಿಯಾದರೂ ಸೇವಿಸಬಹುದು. ಹೀಗೆ ೪೮ ದಿನಗಳವರೆಗೆ ಆಗುವಷ್ಟು ಸೊಪ್ಪನ್ನು ಬೆಳೆಯಿಸಿಕೊಂಡು ಸೇವಿಸಿದರೆ ಎಂತಹ ಅತಿ ಕಷ್ಟ ಸಾಧ್ಯವಾದ ವಾತರೋಗವಾದರೂ ಶಾಂತವಾಗುತ್ತದೆ. ನಿತ್ಯದಲ್ಲಿ ಮೈನೋವು, ಸೊಂಟನೋವು, ಕೀಲುನೋವು, ಬೆನ್ನುನೋವು, ಮುಂತಾದ ಅನೇಕ ನೋವುಗಳಿಂದ ನೋಯುತ್ತಿರುವವರು ಮೆಂತ್ಯದ ಸೊಪ್ಪನ್ನು ಈ ರೀತಿಯಾಗಿ ಬೆಳೆಯಿಸಿಕೊಂಡು ಸೇವಿಸಿ ಆಯಾಸವಿಲ್ಲದೆ ಗುಣವನ್ನು ಹೊಂದಬಹುದು.

೨. ಮೆಂತ್ಯದ ಹಿಟ್ಟಿನ ಪೋಲ್ಟೀಸನ್ನುಮಾಡಿ ಕುರಗಳ ಮೇಲೆ ಕಟ್ಟಿದರೆ ಊತ ಮತ್ತು ನೋವು ಎರಡೂ ದೂರವಾಗುತ್ತವೆ.

೩. ಮೆಂತ್ಯದ ಕಾಳು ೫ ತೊಲ, ನೆಲ್ಲಿಚಟ್ಟು ೫ ತೊಲ, ಧನಿಯ ೫ ತೊಲ, ಈ ಮೂರನ್ನು ರಾತ್ರಿಯಲ್ಲಿ ನೆನೆಹಾಕಿದ್ದು ಪ್ರಾತಃ ಕಾಲದಲ್ಲಿ ನುಣ್ಣಗೆ ಅರೆದು ತಲೆಗೆ ಹಚ್ಚಿಕೊಂಡು ಸ್ವಲ್ಪ ಹೊತ್ತಾದ ನಂತರ ಸ್ನಾನವನ್ನು ಮಾಡಬೇಕು. ಇದರ ಸ್ವಲ್ಪಭಾಗವನ್ನು ಉಳಿಸಿದ್ದು ಶರೀರಕ್ಕೆಹಚ್ಚಿತಿಕ್ಕಿಕೊಳ್ಳಬೇಕು. ಇದರಿಂದ ತಲೆಯಲ್ಲಿನ ಉಷ್ಣತೆಯು ಶಾಂತವಾಗುವುದಲ್ಲದೆ ಚರ್ಮದೋಷಗಳೆಲ್ಲಾ ದೂರವಾಗುತ್ತವೆ.

೪. ಮೆಂತ್ಯ ೧ ಪಾವು, ಹೆಸರುಕಾಳು ೧ ಪಾವು, ಧನಿಯ ೩ ತೊಲ, ಕಚೋರ ೩ ತೊಲ, ಕಸ್ತೂರಿಅರಿಶಿನ ೩ ತೊಲ, ಇವು

ಗಳನ್ನು ಕುಟ್ಟಿ ಶೋಧಿಸಿಟ್ಟುಕೊಳ್ಳಬೇಕು. ಇದರಲ್ಲಿನ ಸ್ವಲ್ಪ ಪುಡಿಯನ್ನು ನೀರಿನೊಡನೆ ಕೂಡಿಸಿ ಶರೀರಕ್ಕೆ ಹಚ್ಚಿ ಸ್ನಾನಮಾಡುವುದರಿಂದ ಮೈಮೇಲೆದ್ದಿರುವ ಪಿತ್ತದ ಗುಳ್ಳೆಗಳು ನಾಶವಾಗುತ್ತವೆ. ಮತ್ತು ಚರ್ಮವು ಸ್ವಚ್ಛವೂ, ಮೃದುವೂ ಆಗುತ್ತದೆ.

೫. ಅಕ್ಕಿ ಅಥವಾ ಗೋಧಿಗೆ ಕಾಲುಭಾಗ ಮೆಂತ್ಯವನ್ನು ಸೇರಿಸಿ ಬೀಸಬೇಕು. ಈ ಹಿಟ್ಟಿನ ರೊಟ್ಟಿ ಅಥವಾ ದೋಸೆಯನ್ನು ಮಾಡಿ, ಮೆಂತ್ಯದ ಸೊಪ್ಪನ್ನು ಹಬೆಯಲ್ಲಿ ಬೇಯಿಸಿ ಮಾಡಿರುವ ಪಲ್ಯದೊಡನೆ ತಿನ್ನುವುದರಿಂದ ಹೊಟ್ಟೆಯೊಳಗಿನ ದೂಷಿತ ವಾಯುವು ಜೀರ್ಣವಾಗುತ್ತದೆ.

೬. ಮೆಂತ್ಯ ೩೨ ತೊಲ, ಒಣಗಿದ ಶುಂಠಿ ೩೨ ತೊಲ, ಇವೆರಡನ್ನೂ ಕುಟ್ಟಿ ಶೋಧಿಸಿಕೊಳ್ಳಿ, ಈ ಚೂರ್ಣವನ್ನು ೩। ಸೇರು ಹಸುವಿನ ಹಾಲಿನಲ್ಲಿ ಹಾಕಿ ಖೋವಾ ಮಾಡಿಕೊಳ್ಳಿ,

ಶುಂಠಿ, ಮೆಣಸು, ಹಿಪ್ಪಲಿ, ಮೋಡಿ, ಚಿತ್ರಮೂಲದಬೇರು, ಅಜವಾನ (ಓಮ), ಧನಿಯ, ಬಿಳಿಯ ಜೀರಿಗೆ, ಕಲೌಂಜಿಜೀರಿಗೆ, ಸೌಂಪು, ಕಚೋರ, ಜಾಕಾಯಿ, ದಾಲಚೀನಿ, ತೇಜಪತ್ರೆ(ಲವಂಗಪತ್ರೆ), ತುಂಗೆ ಗಡ್ಡೆ, ಏಲಕ್ಕಿ ಮತ್ತು ಲವಂಗ, ಈ ೧೭ ವಸ್ತುಗಳನ್ನು ೪-೪ ತೊಲದಂತೆ ತಂದು ಕುಟ್ಟಿ ಶೋಧಿಸಿಕೊಳ್ಳಿ, ಈ ಚೂರ್ಣವನ್ನು ೩೫ ತೊಲ ತುಪ್ಪದಲ್ಲಿ ಕೆಂಪಾಗುವಂತೆ ಸುಪಕ್ವವಾಗಿ ಹುರಿಯಿರಿ. ಅನಂತರ ೮ ಸೇರು ಸಕ್ಕರೆಯ ಪಾಕವನ್ನು ಮಾಡಿಕೊಳ್ಳಿ, ಪಾಕವು ಬರುತ್ತಿರುವಾಗ ಅದರಲ್ಲಿ ಮೆಂತ್ಯ, ಶುಂಠಿಗಳಿಂದಕೂಡಿರುವ ಖೋವಾ ಮತ್ತು ತುಪ್ಪದಲ್ಲಿ ಹುರಿದಿಟ್ಟಿರುವ ಚೂರ್ಣ, ಇವುಗಳನ್ನು ಹಾಕಿ ಕೂಡಿಸಿಬಿಡಿ, ಎಲ್ಲವೂ ಸೇರಿ ಗಟ್ಟಿಯಾದನಂತರ ಕೆಳಗಿಳಿಸಿಕೊಂಡು ೨-೨ ತೊಲೆಯ ಲಡ್ಡುಗಳನ್ನು ಕಟ್ಟಿ ಇಟ್ಟುಕೊಳ್ಳಿ,

ಈ "ಮೇಥೀಮೋದಕ" ವನ್ನು ನಿಮ್ಮ ಬಲವನ್ನನುಸರಿಸಿ ನಿತ್ಯದಲ್ಲಿ ಸೇವಿಸುವುದರಿಂದ ಸಕಲವಿಧ ವಾತರೋಗಗಳು, ಪಾಂಡು ರೋಗ, ಮೂರ್ಛೆ, ಬುದ್ಧಿಭ್ರಮೆ, ಮೇಹವ್ಯಾಧಿ, ತಲೆನೋವು, ಮೂಗು ಮತ್ತು ಕಣ್ಣಿನ ಸಂಬಂಧವಾದ ರೋಗಗಳು ಮತ್ತು ಬಾಣಂತಿಯರ

ರೋಗಗಳು ಅತಿ ಶೀಘ್ರವಾಗಿ ಗುಣವಾಗುತ್ತವೆ ಮತ್ತುಬಲ, ವೀರ್ಯ ಪುಂಸತ್ವಗಳು ಹೆಚ್ಚುತ್ತವೆ. ಇಂದ್ರಿಯಗಳ ಬಲವು ಕಡಿಮೆಯಾಗಿರ ತಕ್ಕವರೆಲ್ಲರೂ ಚಳಿಗಾಲದಲ್ಲಿ ೪ ತಿಂಗಳುಗಳವರೆಗೆ ಈ ಮೋದಕ ವನ್ನು ಅವಶ್ಯವಾಗಿ ತಪ್ಪದೆ ಸೇವಿಸಬೇಕು, ಕಳೆದುಹೋಗಿರುವ ಜೀವನದ ಆಶೆಯು ಪುನಃ ಲಭಿಸುತ್ತದೆ. ಪ್ರಾಚೀನಕಾಲದ ಜನಗಳು ಈ ಮೋದಕವನ್ನು ಶೀತಕಾಲದಲ್ಲಿ ಸೇವಿಸಿ ಬಲಶಾಲಿಗಳಾಗುತ್ತಿದ್ದರು. ಪಾಠಕರು ದಯವಿಟ್ಟು ಪರೀಕ್ಷಿಸಬೇಕು.

---

**ಸಬ್ಬಸಿಗೆ:**—ಉಷ್ಣ, ಸಿಹಿ, ಅಗ್ನಿಯನ್ನು ವೃದ್ಧಿಗೊಳಿಸುವುದು, ಶೂಲ ಮತ್ತು ವಾತವನ್ನು ನಾಶಮಾಡುವುದು, ರುಚಿಕರ, ಪಿತ್ತವನ್ನು ಹೆಚ್ಚಿಸುವುದು ಮತ್ತು ಪಥ್ಯವಾಗಿರುತ್ತದೆ. ಇದರಲ್ಲಿ ಉಷ್ಣಗುಣವು ಹೆಚ್ಚಾಗಿರುವುದರಿಂದ ವಾತ ಮತ್ತು ಕಫ ಸಂಬಂಧವಾದ ರೋಗಗಳಿಗೆ ವಿಶೇಷ ಗುಣಕಾರಿಯಾಗಿದೆ.

೧. ಸಬ್ಬಸಿಗೆ ಬೀಜ, ದೇವದಾರು, ಬಜೆ, ಸೌಂಪು, ಹಿಂಗು, ಹಸನಾದ ಕೋಷ್ಠ ಮತ್ತು ಸೈಂಧವಲವಣ, ಇವುಗಳನ್ನು ಸಮವಾಗಿ ತಂದು ಕುಟ್ಟಿ ಮಜ್ಜಿಗೆ ಅಥವಾ ನಿಂಬೆಹಣ್ಣಿನ ರಸದಲ್ಲಿ ಅರೆದು ಬಿಸಿ ಮಾಡಿ ಹೊಟ್ಟೆಗೆ ಲೇಪಿಸುವುದರಿಂದ ಹೊಟ್ಟೆಯನೋವು, ಹೊಟ್ಟೆಯಲ್ಲಿ ಗುರುಗುಟ್ಟುವುದು ಮುಂತಾದುವುಗಳು ನಾಶವಾಗುತ್ತವೆ. ಈ ಲೇಪವನ್ನು ಶರೀರದ ಯಾವ ಭಾಗದಲ್ಲಿಯೇ ಆಗಲಿ ಬಾವು ಅಥವಾ ನೋವಿದ್ದರೆ ಲೇಪಿಸುವುದು ಲಾಭದಾಯಕವಾಗಿರುತ್ತದೆ.

೨. ಸಬ್ಬಸಿಗೆ ಬೀಜವನ್ನು ಇಪ್ಪೆಯ ಎಣ್ಣೆಯೊಡನೆ ಅರೆದು ಕೀಲುಗಳಿಗೆ ತಿಕ್ಕಿದರೆ ನೋವು ಕಡಿಮೆಯಾಗುತ್ತದೆ.

೩. ಸಬ್ಬಸಿಗೆ ಸೊಪ್ಪಿನ ರಸ ೧ ಸೇರು, ನುಗ್ಗೆ ಸೊಪ್ಪಿನ ರಸ ೧ ಸೇರು, ಆಡಿನ ಮೂತ್ರ ೨ ಸೇರು, ಇವುಗಳನ್ನು ಅಳತೆ ೧ ಸೇರು ಎಳ್ಳೆಣ್ಣೆಯಲ್ಲಿ ಹಾಕಿ ಪಾತ್ರೆಯನ್ನು ಒಲೆಯಮೇಲಿಟ್ಟು ಕಾಯಿಸಬೇಕು, ಕಾಯುವಾಗ—ಬಜೆ, ವಾಯಿವಿಳಂಗ, ಓಮ, ರಾಶ್ಮೆ, ಬೆಳ್ಳುಳ್ಳಿ, ಹಿಂಗು, ಪ್ರತಿಯೊಂದು ಎರಡೆರಡು ತೊಲವನ್ನು ನೀರಿನೊಡನೆ ನುಣ್ಣಗೆ ಅರೆದು ಹಾಕಬೇಕು.

ರಸ ಮತ್ತು ಆಡಿನ ಮೂತ್ರವು ಇಂಗಿ ಎಣ್ಣೆಯು ಮಾತ್ರ ಉಳಿದನಂತರ ೧ ತೊಲ ಕರ್ಪೂರವನ್ನು ಪುಡಿಮಾಡಿ ಹಾಕಿ ಇಳಿಸಿ ಕೊಂಡು ಶೋಧಿಸಿಕೊಳ್ಳಬೇಕು. ಈ ಎಣ್ಣೆಯನ್ನು ಹಚ್ಚಿ, ತಿಕ್ಕುವುದ ರಿಂದ ಲಕ್ವಾ ಮತ್ತು ಕೀಲುವಾಯು ಮುಂತಾದ ಸಕಲವಿಧ ವಾಯು ವಿಕಾರಗಳಿಗೂ ನೋವು,ಬಾವುಗಳಿಗೂ ವಿಶೇಷ ಲಾಭವುಂಟಾಗುತ್ತದೆ.

ಮೂರು ತೊಲ ಸಬ್ಬಸಿಗೆ ಬೀಜಗಳನ್ನು ತಂದು ನೀರಿನೊಡನೆ ಅರೆದು ಬಿಲ್ಲೆಯನ್ನು ಮಾಡಿ ಅದನ್ನುಆಸನಕ್ಕೆ ಇಟ್ಟು, ಮೇಲೆ ಎಕ್ಕದ ಎಲೆಯನ್ನುಕಟ್ಟಬೇಕು. ಈ ರೀತಿಯಾಗಿ ೩ ದಿನಗಳ ವರೆಗೆ ಬಿಡದಂತೆ ಕಟ್ಟುವುದರಿಂದ ರೋಗದ ಮೊಳಕೆಗಳು ಕತ್ತರಿಸಿ ಹೋಗುತ್ತವೆ. ಕಟ್ಟು ವುದಕ್ಕೆ ಎಕ್ಕ,ಅರಳು,ಹೊಗೆಸೊಪ್ಪು, ಈ ಮೂರು ಗಿಡಗಳ ಎಲೆಗಳಲ್ಲಿ ಯಾವುದನ್ನಾದರೂ ಕಟ್ಟಬಹುದು;ಆದರೆ ಕೋಮಲ ಪ್ರಕೃತಿಯವರು ಅರಳಿಲೆಯನ್ನು ಕಟ್ಟುವುದೇ ಉತ್ತಮವಾಗಿ ತೋರುತ್ತದೆ, ಉಳಿ ದೆರಡು, ಒಂದಕ್ಕಿಂತ ಒಂದು ತೀಕ್ಷ್ಣತೆಯಲ್ಲಿ ಸ್ವಲ್ಪ ಸ್ವಲ್ಪ ಮುಂದು ವರಿದಿವೆ.

೪.. ಸಬ್ಬಸಿಗೆ ಸೊಪ್ಪು ಅಥವಾ ಬೀಜ ಮತ್ತು ಸೈಂಧವ ಲವಣ ಇವುಗಳನ್ನು ಅರೆದು ತುಪ್ಪದಲ್ಲಿ ಕೂಡಿಸಿ ಹಚ್ಚುವುದರಿಂದ ಜೇನು ನೊಣಗಳ ವಿಷವು ಶಾಂತವಾಗುತ್ತದೆ.

೫. ಸಬ್ಬಸಿಗೆ ಬೀಜ, ಲವಂಗ,ಅಜವಾನ, ಬೀಡುಲವಣ, ಈ ನಾಲ್ಕನ್ನು ಸಮವಾಗಿ ತಂದು ಕುಟ್ಟಿ ನಿಂಬೆ ಹಣ್ಣಿನ ರಸದಲ್ಲಿ ೩ ಗಂಟೆ ಗಳ ಕಾಲ ಅರೆದು ಸಣ್ಣ ಎಳಚಿಕಾಯಿಯಷ್ಟು ಗುಳಿಗೆಗಳನ್ನುಮಾಡಿ ನೆರಳಿನಲ್ಲಿ ಒಣಗಿಸಿಕೊಳ್ಳಬೇಕು. ಅಜೀರ್ಣ, ಮಂದಾಗ್ನಿಗಳಿಂದ ನಿತ್ಯದಲ್ಲಿ ನರಳುತ್ತಿರುವವರು ಒಂದೊಂದು ಗುಳಿಗೆಯನ್ನು ನುಂಗಿ ಮೇಲೆ ಸ್ವಲ್ಪ ನೀರನ್ನು ಕುಡಿಯಬೇಕು. ನಿರೋಗಿಗಳು ಊಟವಾದ ಮೇಲೆ ಒಂದೊಂದು ಗುಳಿಗೆಯನ್ನು ನುಂಗುತ್ತಿದ್ದರೆ ಹಸಿವು ಹೆಚ್ಚಾಗು ತ್ತದೆ ಮತ್ತು ಆಹಾರವು ಬೇಗನೆ ಪಚನವಾಗುವುದಲ್ಲದೆ ಜೀರ್ಣ ಶಕ್ತಿಯು ಯಾವಾಗಲೂ ಕೆಡುವುದಿಲ್ಲ.

---

**ಪುಳ್ಳಂಪುರಿಚೆ** :—ಹುಳಿರಸದಿಂದ ಕೂಡಿರುವ ಈ ಸೊಪ್ಪು ಜಠರಾಗ್ನಿಯನ್ನು ವೃದ್ಧಿಗೊಳಿಸಿ ಸಂಗ್ರಹಣಿ ಮತ್ತು ಅತಿಸಾರವನ್ನು ನಾಶಮಾಡುತ್ತದೆ. ಅಗ್ನಿಮಾಂದ್ಯ, ಗುಲ್ಮ, ಮೂಲವ್ಯಾಧಿಗಳನ್ನು ಶಾಂತಗೊಳಿಸುತ್ತದೆ. ಮೂತ್ರವನ್ನು ಸಡಲಿಸುವುದಲ್ಲದೆ ಹೊಟ್ಟೆ ಯೊಳಗಿನ ಸಮಸ್ತ ವಿಕಾರಗಳನ್ನೂ ದೂರಮಾಡುತ್ತದೆ. ಸಂಗ್ರಹಣಿ ರೋಗದಿಂದ ನರಳುತ್ತಿರುವವರು ಈ ಸೊಪ್ಪಿನ ೨ ತೊಲ ರಸಕ್ಕೆ ಸೈಂಧವಲವಣ, ಹುರಿದ ಜೀರಿಗೆಂಯ ೪-೪ ಗುಂಜಿಗಳಷ್ಟುಪುಡಿಯನ್ನು ಸೇರಿಸಿ ಪ್ರಾತಃಕಾಲ ಸಾಯಂಕಾಲಗಳಲ್ಲಿ ಕುಡಿಯುವುದುತ್ತಮ.

ಅತಿಸಾರ ಮತ್ತು ಸಂಗ್ರಹಣಿ ಇವೆರಡೂ ಕರುಳಿಗೆ ಸಂಬಂಧಿ ಸಿರುವ ರೋಗಗಳೇನೋ ನಿಜ. ಆದರೆ ಅತಿಸಾರದಲ್ಲಿ ಶರೀರದ ಸಂಪೂರ್ಣ ಜಲೀಯ ಧಾತುಗಳು (ನೀರಿನ ಅಂಶವು ಹೆಚ್ಚಾಗಿರ ತಕ್ಕ ರಸ ಮುಂತಾದುವುಗಳು) ದೂಷಿತಗಳಾಗುವುದರಿಂದ ಆಹಾರ-ಪರಿಪಾಕಯಂತ್ರದ ಕಾರ್ಯವು ಮಾತ್ರ ಕೆಟ್ಟು ನೀರಿನಂತಹ ಭೇದಿಗಳಾಗುವುವು. ಮತ್ತು ಹೊಟ್ಟೆಯನೋವು, ಹೊಟ್ಟೆಯ ನುಲಿತ, ಮೈಭಾರ, ಆಲಸ್ಯ ಮುಂತಾದ ತೊಂದರೆಗಳು ಹೆಚ್ಚಾಗಿ ಬರುತ್ತವೆ. ಪಾಕ ಯಂತ್ರವು ಕೆಡುವುದಿಲ್ಲ.

ಸಂಗ್ರಹಣಿಯಲ್ಲಿ—ಆಹಾರವನ್ನು ಪರಿಪಾಕ ಮಾಡತಕ್ಕ ಅಗ್ನಿಗೆ ಆಶ್ರಯವಾಗಿರುವ "ಗ್ರಹಣಿ" ಎಂಬ ಕರುಳು ದೂಷಿತ ವಾಗಿ ಅದರ ಶಕ್ತಿಯು ಕಡಿಮೆಯಾಗುವುದು, ಈ ಕಾರಣದಿಂದ ಪರಿಪಾಕ ಯಂತ್ರವೇ ಕೆಟ್ಟು ಹೋಗುತ್ತದೆ. ಹೀಗಾಗಿ ಕೆಲವು ದಿನಗಳಲ್ಲಿ ನೀರಿನಂತೆ, ಕೆಲವು ದಿನಗಳಲ್ಲಿ ಗಟ್ಟಿಯಾಗಿ, ಭೇದಿ ಗಳಾಗುವುವು. ಹೊಟ್ಟೆಯಲ್ಲಿ ಮತ್ತು ಕರುಳಿನಲ್ಲಿ ಸ್ವಲ್ಪ ನೋವು ಇರುತ್ತದೆ. ಈ ರೋಗವು ಬಂದಾಗ ಒಂದೊಂದು ಸಲ ಬಹಳ ಹಸಿವಾಗುತ್ತದೆ ಮತ್ತು ಅನೇಕ ವಿಧ ರಸಗಳನ್ನು ಸೇವಿಸಬೇಕೆಂಬ ಆಶೆಯು ಹೆಚ್ಚಾಗುತ್ತದೆ. ಮೊದಲು ಅತಿಸಾರವು ಬಂದು ಗುಣ ವಾದ ಕೂಡಲೇ ನಾಲಗೆಯ ಚಟವನ್ನು ತಡೆಯದೆ ಅಪಥ್ಯಾಹಾರ ವನ್ನು ಸೇವಿಸತಕ್ಕವರಿಗೆ ಈ ರೋಗವು ಹೆಚ್ಚಾಗಿ ಬರುವುದುಂಟು. ಆಹಾರವನ್ನು ಗ್ರಹಣಮಾಡಿ, ಅದನ್ನು ಅರಗಿಸಿ, ಪಕ್ವವಾದ

ಭಾಗವನ್ನು ಹೊರಕ್ಕೆ ತಳ್ಳುವುದೇ ಗ್ರಹಣಿಯ ಕೆಲಸವಾಗಿರುತ್ತದೆ. ಆದುದರಿಂದ ಇದರಿಂದ ಬರುವ ರೋಗಕ್ಕೂ "ಗ್ರಹಣಿ" ಅಥವಾ "ಸಂಗ್ರಹಣಿ" ಎಂಬ ಹೆಸರು ಬಂದಿದೆ. ಗ್ರಹಣಿ ಸಂಗ್ರಹಣಿಗಳಲ್ಲಿ ವಿಶೇಷ ಭೇದವೇನೂ ಇಲ್ಲ. ಗ್ರಹಣಿಯು, ಅಪಕ್ವವಾಗಿರುವ ಆಹಾರ ದೊಡನೆ ಸೇರಿಕೊಂಡಿರುವ ವಾಯು " ಆಮವಾಯು " ವನ್ನು ಯಾವಾಗ ಸಂಗ್ರಹ ಮಾಡುವುದೋ ಆಗ ಅದಕ್ಕೆ ಸಂಗ್ರಹಣಿ ಯೆಂಬ ಹೆಸರು ಬರುತ್ತದೆ. ಗ್ರಹಣಿಗಿಂತಲೂ ಸಂಗ್ರಹಣಿಯು ಅತಿ ಭಯಂಕರ ವ್ಯಾಧಿಯಾಗಿರುತ್ತದೆ. ಇದು ಒಂದೇ ಸಲ ಹಾಸಿಗೆಯನ್ನು ಹಿಡಿಸತಕ್ಕುದಲ್ಲ. ಕ್ರಮ ಕ್ರಮವಾಗಿ ಹೆಚ್ಚುತ್ತ ಕಡೆಗೆ ಅಸಾಧ್ಯವಾಗಿಬಿಡುತ್ತದೆ. ಈ ರೋಗವು ಬರುವುದಕ್ಕೆ ಸ್ವಲ್ಪ ಮೊದಲು ಬಾಯಾರಿಕೆ, ಆಲಸ್ಯ, ಶಕ್ತಿ ಕುಂದುವುದು, ಅನ್ನವು ಅರಗುವ ಸಮಯದಲ್ಲಿ ಹೊಟ್ಟೆಯಲ್ಲಿ ಉರಿಯುವುದು, ಅನ್ನವು ಬಹಳ ತಡವಾಗಿ ಅರಗುವುದು ಮತ್ತು ಶರೀರವು ಭಾರ ವಾಗುವುದು, ಇವೇ ಮುಂತಾದ ಲಕ್ಷಣಗಳು ತಲೆದೋರುವುವು. ಇದು ಈ ರೋಗದ " ಪೂರ್ವರೂಪ " ವಾಗಿದೆ. ಸಂಗ್ರಹಣಿಯ ಸಾಮಾನ್ಯ ಸ್ವರೂಪವನ್ನೇ ಇಲ್ಲಿ ತೋರಿಸಿರುವುದಾಗಿದೆ.

೧. ಪುಳ್ಳಂಪುರುಚೆಯ ರಸಕ್ಕೆ ಬಿಳಿ ಈರುಳ್ಳಿಯ ರಸವನ್ನು ಸೇರಿಸಿ ಕಣ್ಣುಗಳಿಗೆ ಹಾಕುವುದರಿಂದ ದುರ್ಮಾಂಸವು ಕರಗುತ್ತದೆ.

೨. ಪುಳ್ಳಂಪುರಚೆಯ ರಸ ೨ ತೊಲ, ಹುರಿದ ಹಿಂಗು ೧ ಗುಂಜಿಯ ತೂಕ, ಹಿಪ್ಪಲಿ ೨ ಗುಂಜಿಗಳ ತೂಕ, ಸೈಂಧವಲವಣ ೨ ಗುಂಜಿಗಳ ತೂಕ, ಹುರಿದ ಜೀರಿಗೆ ೨ ಗುಂಜಿಗಳ ತೂಕ, ಮೆಣಸು ೧ ಗುಂಜಿಯ ತೂಕ, ಇವುಗಳನ್ನೆಲ್ಲಾ ಒಟ್ಟುಗೂಡಿಸಿ ಪ್ರತಿದಿನದ ಪ್ರಾತಃಕಾಲ ಸಾಯಂಕಾಲಗಳಲ್ಲಿ ಕುಡಿಯುವುದರಿಂದ ಹಳೆಯ ಸಂಗ್ರ ಹಣಿ, ಅತಿಸಾರ,ಹೊಟ್ಟೆಯೊಳಗಿನಗಡ್ಡೆ ಇವುಗಳು ಖಂಡಿತವಾಗಿ ನಾಶ ವಾಗುವುವು. ಈ ಔಷಧಿಯನ್ನು ಸೇವಿಸುವಾಗ ಹಸುವಿನ ಮಜ್ಜಿಗೆಗೆ ಹಿಪ್ಪಲಿ, ಜೀರಿಗೆ, ಶುಂಠಿ, ಸೈಂಧವಲವಣಗಳನ್ನು ಅರೆದು ಹಾಕಿ, ಈ ಮಜ್ಜಿಗೆಯೊಡನೆ ಹಳೆಯ ಅಕ್ಕಿಯ ಅನ್ನವನ್ನು ಭುಂಜಿಸಬೇಕು. ಇದರಂತೆ ೨೧ ದಿನಗಳ ವರೆಗೆ ಮಾಡಬೇಕು. ಈ ಮಜ್ಜಿಗೆಯನ್ನು ಯಥೇಷ್ಟವಾಗಿ ಕುಡಿಯಬಹುದು. ಈ ಪಥ್ಯವು ರೋಗ ನಿವಾರಣೆಗೆ

ಅತ್ಯಾವಶ್ಯಕವಾಗಿದೆ. ಇದರಿಂದ ಅಗ್ನಿಯು ವೃದ್ಧಿಯಾಗಿ ಜೀರ್ಣ ಶಕ್ತಿಯು ಹೆಚ್ಚುತ್ತದೆ. ಅನಂತರ ಉದರ ರೋಗಗಳೆಲ್ಲವೂ ತಮ್ಮಷ್ಟಕ್ಕೆ ತಾವೇ ತಣ್ಣಗಾಗುತ್ತವೆ. ಅಗ್ನಿಬಲವೊಂದು ಸರಿಯಾಗಿದ್ದರೆ ಯಾವ ಉದರ ರೋಗವೂ ಬರುವುದಿಲ್ಲ.

೩. ಹಿಪ್ಪಲಿ, ಮೋಡಿ, ಚಿತ್ರಮೂಲದ ಬೇರು, ಚವ್ಯ, ನೆಗ್ಗಿಲಿಮುಳ್ಳು, ಶುಂಠಿ, ಧನಿಯ ಅಗಳ ಶುಂಠಿ, ಬಿಲ್ವದ ತಿರುಳು, ಅಜವಾನ, ಪ್ರತಿಯೊಂದು ೪-೪ ತೊಲ ತಂದು ಕುಟ್ಟಿ ನೀರಿನೊಡನೆ ಅರೆದು ಚಟ್ನಿಯನ್ನು ಮಾಡಿಕೊಳ್ಳಬೇಕು, ಅನಂತರ ೬೪ ತೊಲ ಹಸುವಿನ ತುಪ್ಪ, ಪುಳ್ಳಂಪುರುಚಿ ಸೊಪ್ಪಿನ ರಸ, ೨೫೬ ತೊಲ, ಗಟ್ಟಿಮಜ್ಜಿಗೆ ೨೫೬ ತೊಲ, ಇವುಗಳನ್ನು ಒಂದು ಕಲಾಯಿಯ ಪಾತ್ರೆಯಲ್ಲಿ ಹಾಕಬೇಕು, ಆ ಪಾತ್ರೆಯಲ್ಲಿ ಮೇಲಿನ ಚಟ್ನಿಯನ್ನೂ ಹಾಕಿ ಮಂದಾಗ್ನಿಯಿಂದ ಕಾಯಿಸಬೇಕು. ರಸ ಮತ್ತು ಮಜ್ಜಿಗೆಯು ಇಂಗಿ ತುಪ್ಪವು ಮಾತ್ರ ಉಳಿದ ಮೇಲೆ ಇಳಿಸಿ ಶೋಧಿಸಿಕೊಳ್ಳಬೇಕು. ಈ "ಬೃಹತ್ ಚಾಂಗೇರೀಘೃತ" ವು ಕಫ ಮತ್ತು ವಾಯುವಿನ ವಿಕಾರ, ಸಂಗ್ರಹಣಿ, ಮೂಲವ್ಯಾಧಿ, ಮೂತ್ರಕಟ್ಟು ಅತಿಸಾರ ಮುಂತಾದ ರೋಗಗಳನ್ನು ಗುಣಪಡಿಸುತ್ತದೆ. ಪ್ರಮಾಣ, ಅರ್ಧ ತೊಲದಿಂದ ಒಂದು ತೊಲದವರೆಗೆ ಹಾಲು ಅಥವಾ ಹೆಸರು ಕಾಳನ್ನು ಬೇಯಿಸಿದ ಕಟ್ಟಿನೊಡನೆ ಸೇವಿಸಬೇಕು.

---

**ವಿಷ್ಣುಕ್ರಾಂತಿಸೊಪ್ಪು** :—ಇದನ್ನು ತರಕಾರಿಯ ರೂಪವಾಗಿ ತಿನ್ನುವ ಪದ್ಧತಿಯು ಯಾವ ದೇಶದಲ್ಲಿಯೂ ವಿಶೇಷವಾಗಿಲ್ಲ. ಔಷಧಿ ರೂಪವಾಗಿಯೂ ಇದನ್ನು ಅಷ್ಟು ಹೆಚ್ಚಾಗಿ ಉಪಯೋಗಿಸುತ್ತಿಲ್ಲ. ಈ ಸೊಪ್ಪನ್ನು ಇತರ ಸೊಪ್ಪುಗಳಂತೆ ಬೆಳೆಯಿಸುವುದೂ ಕಡಿಮೆ. ಇದರ ರುಚಿಯು ಸ್ವಲ್ಪ ಕಹಿಯಾಗಿರುವುದರಿಂದ ಇದರಲ್ಲಿ ಜನಗಳ ಅಭಿರುಚಿಯು ಕಡಿಮೆಯಾಗಿದೆ. ಎಲ್ಲಾ ದೇಶಗಳಲ್ಲಿಯೂ ಈ ಸೊಪ್ಪನ್ನು ಜ್ವರದ ರೋಗಿಗಳಿಗೆ ಆಹಾರ ರೂಪವಾಗಿ ಸಾರನ್ನು ಮಾಡಿ ಕೊಡುವ ರೂಢಿ ಇರುವುದರಿಂದ ಸಾಮಾನ್ಯವಾಗಿ ಜನಗಳು ಇದರ ಗುಣದಿಂದ ಪರಿಚಿತರಾಗಿಯೇ ಇರುತ್ತಾರೆ. ಇದರಲ್ಲಿ ಬಿಳುಪು ಮತ್ತು ನೀಲವರ್ಣದ ಎರಡು ಜಾತಿಗಳಿವೆ.

ಬಿಳಿಯ ವಿಷ್ಣುಕ್ರಾಂತಿ —ಶೀತಲ, ಕಹಿ, ಬುದ್ಧಿವರ್ಧಕ, ಕಣ್ಣು ಗಳಿಗೆ ಹಿತಕಾರಿ, ಭೇದಿಕಾರಿ, ವಿಷನಾಶಕ, ಮತ್ತು ತ್ರಿದೋಷಗಳನ್ನು ಶಮನಗೊಳಿಸುತ್ತದೆ. ತಲೆಶೂಲೆ, ಕುಷ್ಠ, ದಾಹ, ಪಿತ್ತವಿಕಾರ, ಬಾವು, ಕೃಮಿರೋಗ, ವ್ರಣಗಳು, ಗ್ರಹಬಾಧೆ ಇವುಗಳನ್ನು ನಾಶ ಗೊಳಿಸುವುದಲ್ಲದೆ ಮಂಡಲದ ಹಾವಿನ ವಿಷವನ್ನೂ ನಿವಾರಣೆ ಮಾಡು ತ್ತದೆ. ಇದರಲ್ಲಿ ಬಿಳಿಯ ಹೂಗಳು ಬಿಡುತ್ತವೆ.

ನೀಲವರ್ಣದ ವಿಷ್ಣುಕ್ರಾಂತಿ —ಕಹಿ, ತ್ರಿದೋಷ ನಾಶಕ, ತಂಪು ಗುಣವುಳ್ಳುದು, ಜ್ವರ, ದಾಹ, ಭ್ರಮೆ, ಪಿಶಾಚಬಾಧೆ, ರಕ್ತ ಭೇದಿ, ಹುಚ್ಚು, ಮಾದಕ ವಸ್ತುಗಳಿಂದುಂಟಾಗುವ ಬುದ್ಧಿಭ್ರಮಣೆ, ಕೆಮ್ಮು, ದಮ್ಮು, ಕ್ಷಯ ಇವುಗಳನ್ನು ದೂರಮಾಡುವುದಾಗಿದೆ.

ಇವೆರಡರಲ್ಲಿ ಬಿಳಿಯದೇ ವಿಷನಿವಾರಣೆಗೆ ಹೆಚ್ಚಾಗಿ ಉಪ ಯೋಗಿಸಲ್ಪಡುತ್ತದೆ.

೧. ಬಿಳಿಯ ವಿಷ್ಣುಕ್ರಾಂತಿ (ಬೇರು ಸಹಿತ), ಅಶ್ವಗಂಧ, ದ್ರಾಕ್ಷಿ, ಕಾವಿ, ತುಲಸಿ ಎಲೆ, ಬೇಲದ ಎಲೆ, ಬಿಲ್ವಪತ್ರೆ, ದಾಳಿಂಬರೆ ಎಲೆ, ಇವುಗಳನ್ನೆಲ್ಲಾ ಸಮವಾಗಿ ಒಟ್ಟುಗೂಡಿಸಿ ಅರೆದು ಜೇನುತುಪ್ಪ ದೊಡನೆ ಸೇವಿಸುವುದರಿಂದ ಮಂಡಲದ ಹಾವಿನ ವಿಷವು ಇಳಿಯು ತ್ತದೆ. ಬಿಳಿಯುದು ಸಿಗದ ಪಕ್ಷಕ್ಕೆ ನೀಲಿಯದನ್ನೇ ಉಪಯೋಗಿಸಿ ಕೊಳ್ಳಬಹುದು.

೨. ವಿಷ್ಣುಕ್ರಾಂತಿಯ ೨ ತೊಲ ಬೇರನ್ನು ೧ ತೊಲ ಶಿವ ಲಿಂಗ ಪುಷ್ಪದ ಬೀಜಗಳೊಡನೆ ಅರೆದು ಹಾಲಿನೊಡನೆ ೨೧ ದಿನಗಳ ವರೆಗೆ ಗರ್ಭಿಣಿಯಾದ ಸ್ತ್ರೀಯು ಕುಡಿಯುವುದಾದರೆ ಪುತ್ರನನ್ನೇ ಪಡೆಯುತ್ತಾಳೆಂದು ಅನೇಕ ಆಯುರ್ವೇದ ಗ್ರಂಥಗಳಲ್ಲಿ ಉಲ್ಲೇಖ ವಿರುತ್ತದೆ ಮತ್ತು ಅನೇಕ ಔತ್ತರೇಯ ಭಿಷಜ್ಮಣಿಗಳು ಪರೀಕ್ಷಿಸಿ ಇಂತಹ ಪ್ರಯೋಗಗಳಲ್ಲಿ ಬಹುಮಟ್ಟಿಗೆ ಸತ್ಯಾಂಶವಿದೆಯೆಂದು ಹೇಳು ತ್ತಾರೆ. ಅಥವಾ ಶಿವಲಿಂಗ ಪುಷ್ಪದ ಬೀಜಗಳನ್ನು ಒಂದೊಂದು ತೊಲ ದಂತೆ ಸಮಭಾಗದ ಬಿಳಿಯ ಜೀರಿಗೆಯೊಡನೆ ಅರೆದು ಹಾಲಿನಲ್ಲಿ ಕೂಡಿಸಿ, ಸ್ತ್ರೀಯರು ಋತುಸ್ನಾನವಾದನಂತರ ೨೧ ದಿನಗಳವರೆಗೆ

ಕುಡಿಯುವುದರಿಂದ ಗರ್ಭವು ಅವಶ್ಯವಾಗಿ ನಿಲ್ಲುವುದು. ಸಂತಾನೋತ್ಪತ್ತಿಗೆ ಸಹಾಯಕಳಾದ ಇಂತಹ ನೂರಾರು ಪ್ರಯೋಗಗಳು ಆಯುರ್ವೇದ ಗ್ರಂಥಗೆಳಲ್ಲಿ ಹೇಳಲ್ಪಟ್ಟಿವೆ.

ಮಾಸಿಕ ಋತುಸ್ನಾನವಾದ ನಂತರ ೨ ತೊಲ ಅಶ್ವಗಂಧವನ್ನು ಕುಟ್ಟಿ ಚೂರ್ಣಿಸಿ ಹಾಲಿನಲ್ಲಿ ಹಾಕಿ ಕುದಿಸಿ ತುಪ್ಪ ಮತ್ತು ಸಕ್ಕರೆಯನ್ನು ಕೂಡಿಸಿ ಪ್ರಾತಃಕಾಲದಲ್ಲಿ ಕುಡಿಯಬೇಕು. ಅದೇ ರಾತ್ರಿಯಲ್ಲಿ ಪತಿಸಹವಾಸವಾದರೆ ಅವಶ್ಯವಾಗಿ ಗರ್ಭಧಾರಣೆಯಾಗುತ್ತದೆ.

ನಸುಗುನ್ನಿಯ ಬೀಜ (ಈ ಗಿಡದ ಎಲೆಗಳು ಚರ್ಮಕ್ಕೆತಗಲಿದ ಮಾತ್ರಕ್ಕೇ ಮೈಯಲ್ಲಿ ನವೆಯುಂಟಾಗುತ್ತದೆ. ಈ ಗಿಡಕ್ಕೆ ಸಂಸ್ಕೃತದಲ್ಲಿ ‚‚ಆತ್ಮಗುಪ್ತಾ-ಕಪಿಕಚ್ಛೂ'' ಮುಂತಾದ ಹೆಸರುಗಳಿವೆ) ಅಥವಾ ಶಿವಲಿಂಗಪುಷ್ಪದ ಬೀಜ, ಬೇಲದ ಹಣ್ಣಿನ ತಿರುಳು ಇವುಗಳಲ್ಲಿ ಯಾವುದನ್ನಾದರೂ ಹಾಲಿನಲ್ಲಿ ಅರೆದು ಗರ್ಭವತಿಯು ೨೧ ದಿನಗಳವರೆಗೆ ಕುಡಿದರೆ ಖಂಡಿತವಾಗಿ ಪುತ್ರನನ್ನೇ ಹಡೆಯುವಳೆಂದು ಒಬ್ಬ ಪ್ರಸಿದ್ಧ ವೈದ್ಯರು ಬರೆದಿರುತ್ತಾರೆ.

ಎರಡು ತೊಲ ಅಶ್ವಗಂಧವನ್ನು (ಪಂಜಾಬ್‌ನಿಂದ ಬರುವುದಕ್ಕೆ ಸೀಮೆ ಅಶ್ವಗಂಧವೆಂದು ಹೇಳುತ್ತಾರೆ ಇದು ಬಹಳ ಬೆಳ್ಳಗಿರುತ್ತದೆ. ಗುಣದಲ್ಲಿಯೂ ಶ್ರೇಷ್ಠವಾಗಿದೆ ಇದನ್ನೇ ಉಪಯೋಗಿಸುವುದುತ್ತಮ) ಹಸುವಿನ ಹಾಲಿನಲ್ಲಿ ಅರೆದು ಚಟ್ನಿಯನ್ನು ಮಾಡಿಕೊಳ್ಳಬೇಕು, ಅನಂತರ ಆ ಚಟ್ನಿಯನ್ನು ಒಂದು ಪಾತ್ರೆಗೆ ಹಾಕಿ, ಮೇಲೆ ೧ ಪಾವು ಹಸುವಿನ ಹಾಲನ್ನೂ ೧ ತೊಲ ಹಸುವಿನ ತುಪ್ಪವನ್ನೂ ಹಾಕಿ ಮಂದಾಗ್ನಿಯಿಂದ ಕಾಯಿಸಬೇಕು, ಚೆನ್ನಾಗಿ ಕಾಯ್ದ ನಂತರ ಬಟ್ಟೆಯಿಂದ ಶೋಧಿಸಿಕೊಂಡು ಸ್ತ್ರೀಯು ಮಾಸಿಕ ಋತುಸ್ನಾನವನ್ನು ಮಾಡಿ ಆ ನಾಲ್ಕನೆಯ ದಿನದ ಪ್ರಾತಃಕಾಲದಲ್ಲಿಯೇ ಕುಡಿಯಬೇಕು ಆ ದಿನ ಕೇವಲ ಹಾಲು, ಅನ್ನವನ್ನೇ ಭುಂಜಿಸಬೇಕು ಆ ರಾತ್ರಿಯಲ್ಲಿ ಪತಿಸಹವಾಸವು ಆದರೆ ಖಂಡಿತವಾಗಿ ಗರ್ಭಧಾರಣೆಯಾಗುತ್ತದೆ. ಇದು ಶಾಸ್ತ್ರೋಕ್ತವಾದ ಪ್ರಯೋಗವು. ಇದರಂತೆ ಆಚರಿಸಿ ಅನೇಕರು ಸಫಲತೆಯನ್ನು ಪಡೆದಿರುತ್ತಾರೆ. ಆದರೆ ಇದನ್ನು ಸೇವಿಸತಕ್ಕ ಸ್ತ್ರೀ

ಯಲಿಗೆ ಪ್ರದರ ಅಥವಾ ಗರ್ಭಾತಯದ ಮತ್ತಾವ ದೋಷವೂ ಇರ ಕೂಡದು. ಹಾಗೇನಾದರೂ ಇದ್ದರೆ ಅದನ್ನು ನಿವಾರಿಸಿಕೊಂಡು ಇಂತಹ ಗರ್ಭಪ್ರದ ಪ್ರಯೋಗವನ್ನು ಮಾಡಿಕೊಳ್ಳಬೇಕು. ಪ್ರದರ ಮುಂತಾದ ದೋಷಗಳೇ ಗರ್ಭಧಾರಣೆ ಅಡ್ಡಿಯಾಗಿರುತ್ತವೆ. ಅನೇಕರು ಈ ತತ್ವವನ್ನರಿಯದೆ ಸಂತಾನಕ್ಕಾಗಿ ಯಂತ್ರ, ಮಂತ್ರ, ನಾನಾ ದೇವತೆಗಳ ಹರಕೆ, ಮುಂತಾದ ಹೊರಗಿನ ಉಪಕರಣಗಳ ಹಿಂದೆಯೇ ಓಡಿ ಆರ್ಥಿಕ ಹಾನಿಯ ಜತೆಗೆ ಶಾರೀರಕ ಮತ್ತು ಮಾನಸಿಕ ವ್ಯಥೆಗಳಿಗೆ ಗುರಿಯಾಗುತ್ತಾರೆ.

ಯಾರೇ ಆಗಲಿ ಮೊದಲು ದಂಪತಿಗಳಾದ ತಮ್ಮಲ್ಲಿ ಶಾರೀರಕ ದೋಷಗಳಿದ್ದರೆ ಅವುಗಳನ್ನು ಕಳೆದುಕೊಂಡು ಅನಂತರ ಯಾವ ಹೊರಗಿನ ಉಪಾಯವನ್ನಾದರೂ ಹುಡುಕಿಕೊಳ್ಳಬಹುದು ಈ ಮುಖ್ಯ ಕಾರ್ಯವನ್ನು ಬಿಟ್ಟು ಬಾಹ್ಯೋಪಕರಣಗಳಿಗೇ ಮರುಳಾಗ ತಕ್ಕವರು ಖಂಡಿತವಾಗಿ ಸಫಲತೆಯನ್ನು ಹೊಂದಲಾರರು. ಪ್ರತಿ ಯೊಂದು ಕಾರ್ಯದ ಸಾಧನೆಗೂ ಮುಖ್ಯವಾದ ಪ್ರಯತ್ನವನ್ನು ಮಾಡಿ, ಅನಂತರ ಆದಕ್ಕೆ ವಿಘ್ನಗಳುಂಟಾಗದಿರುವುದಕ್ಕೆ ದೇವರ ಅಥವಾ ಮಹಾತ್ಮರ ಅನುಗ್ರಹವನ್ನು ಕೋರಬೇಕಾದುದು ಉತ್ತಮ ಮಾರ್ಗಗಲ್ಲದೆ ಪ್ರತಿಯೊಂದು ಕಾರ್ಯವನ್ನೂ ದೇವರ ಪಾಲಿಗೇ ಬಿಟ್ಟು ಬಿಟ್ಟರೆ ಕಾರ್ಯಸಾಧನೆಯಾಗುವುದೆ? ಈ ಮಾತು ನಮ್ಮ ಜೀವನದ ಪ್ರತಿಕ್ಷಣದಲ್ಲಿ ಜರುಗುವ ಪ್ರತಿಯೊಂದು ಕಾರ್ಯಕ್ಕೂ ಸಂಬಂಧಿಸಿರು ವುದಾಗಿದೆ. ಪರಿಶೀಲಿಸಿದರೆ ಎಲ್ಲರಿಗೂ ಗೊತ್ತಾಗುತ್ತದೆ.

೩. ವಿಷ್ಣುಕ್ರಾಂತಿಯ ಬೇರು, ಅಶ್ವಗಂಧ, ಹಿಪ್ಪಲಿ, ಶುಂಠಿ, ಮೆಣಸು, ನಾಗಕೇಸರಿ, ಇವುಗಳನ್ನು ಸಮಭಾಗವಾಗಿ ತಂದು ಕುಟ್ಟಿ ಶೋಧಿಸಿಕೊಳ್ಳಬೇಕು. ಇದರಲ್ಲಿ ಅರ್ಧ ಅರ್ಧ ತೊಲ ಚೂರ್ಣ ವನ್ನು ಹಸುವಿನ ತುಪ್ಪದೊಡನೆ ಕೂಡಿಸಿ ಸ್ತ್ರೀಯು ಮಾಸಿಕ ಋತು ಸ್ನಾನವಾದ ನಂತರ ಸೇವಿಸಬೇಕು. ಅದೇ ರಾತ್ರಿಯಲ್ಲಿ ಪತಿ ಸಹವಾಸ ವಾದರೆ ಖಂಡಿತವಾಗಿ ಗರ್ಭಧಾರಣೆಯಾಗಿ ಪುತ್ರನೇ ಜನಿಸುವನೆಂದು ಡಿಲ್ಲಿಯ ಒಬ್ಬಪ್ರತಿಷ್ಠಿತ ವೈದ್ಯವಿದ್ವಾಂಸರು ಹೇಳಿರುತ್ತಾರೆ. ಆ ಪಂಡಿತರು ಸಂತಾನಾಭಿಲಾಷೆಯುಳ್ಳ ಅನೇಕ ಸ್ತ್ರೀಯರಿಗೆ ಮೊದಲು ಪ್ರದರ

ಮತ್ತು ತಡೆದಿರುವ, ಅಕ್ರಮದಿಂದಾಗುವ ಮಾಸಿಕಧರ್ಮದ ತೊಂದರೆಗಳನ್ನು ಹೋಗಲಾಡಿಸಿ ಅನಂತರ ಈ ಪ್ರಯೋಗವನ್ನು ಹೇಳುತ್ತಿದ್ದರು ಅದರಂತೆಯೇ ಆಚರಿಸಿದವರಲ್ಲಿ ಸೇಕಡಾ ೫೦ ಜನರಿಗೆ ಸಫಲತೆಯು ದೊರೆತಿರುತ್ತದೆ.

೪. ವಿಷ್ಣುಕ್ರಾಂತಿಯ ಬೇರು, ಬೇಲದ ಹಣ್ಣಿನ ತಿರುಳು ಶಿವಲಿಂಗದ ಬೀಜ, ಇವುಗಳನ್ನು ಸಮವಾಗಿ ತಂದು ಒಣಗಿಸಿ ಚೂರ್ಣವನ್ನು ಮಾಡಬೇಕು. ಮಾಸಿಕ ಸ್ನಾನವಾದ ನಂತರ ಅದೇ ದಿನ ಪ್ರಾತಃಕಾಲದಲ್ಲಿ ಈ ಚೂರ್ಣವನ್ನು ಹಾಲಿನೊಡನೆ ಸೇವಿಸಿದರೆ ಅವಶ್ಯವಾಗಿ ಗರ್ಭಧಾರಣೆಯಾಗುತ್ತದೆ.

೫. ರಜೋದೋಷವಿಲ್ಲದ ಸ್ತ್ರೀಯಳು ವಿಷ್ಣುಕ್ರಾಂತಿಯ ಬೇರಿನ ಚೂರ್ಣ ಮತ್ತು ಅಶ್ವಗಂಧದ ಚೂರ್ಣ, ಈ ೨ ಚೂರ್ಣಗಳನ್ನು "ಬೆಳ್ಳಿಯಭಸ್ಮ" ದೊಡನೆ ಸೇರಿಸಿ ಹಸುವಿನ (ಕರುವಿರಬೇಕು) ಹಾಲಿನಲ್ಲಿ ಅರೆದು ಋತುಸ್ನಾನದ ದಿನದಿಂದ ೭ ದಿನಗಳವರೆಗೆ ಸೇವಿಸಬೇಕು, ಖಂಡಿತವಾಗಿ ಗರ್ಭಧಾರಣೆಯಾಗುತ್ತದೆ. ಯಾವ ಯಂತ್ರ, ಮಂತ್ರ, ಔಷಧಿಗಳಿಂದಲೂ ವಂಧ್ಯಾ ಸ್ತ್ರೀಯರಿಗೆ ಗರ್ಭಧಾರಣೆಯಾಗದಿದ್ದರೆ ಈಪ್ರಯೋಗದಿಂದ ಅವಶ್ಯವಾಗಿ ಗರ್ಭವು ನಿಲ್ಲುತ್ತದೆ. ಇದನ್ನು ಹರದ್ವಾರದಿಂದ ಕಾಶಿಗೆ ಬಂದಿದ್ದ ಒಬ್ಬ ಮಹಾತ್ಮರು ಹೇಳಿದ್ದರು. ಬಂಜೆತನದಿಂದ ದುಃಖಿಸುತ್ತಿರುವ ನಮ್ಮ ದೇಶದ ಮಹಿಳೆಯರು ದಯಮಾಡಿ ಈ ಪ್ರಯೋಗವನ್ನು ಪರೀಕ್ಷಿಸಬೇಕು. ವಂಧ್ಯಾ ಸ್ತ್ರೀಯರು ಇದನ್ನು ೩ ದಿನಗಳು ಮಾತ್ರ ಸೇವಿಸಿದರೆ ಸಾಕೆಂದು ಹೇಳಿರುತ್ತಾರೆ. ಪರೀಕ್ಷಿಸತಕ್ಕವರು ಮಾಸಿಕ ಋತುಸ್ನಾನವಾದನಂತರ ೭ ದಿನಗಳವರೆಗೆ ಸೇವಿಸುದುತ್ತಮ. ಬೆಳ್ಳಿಯ ಭಸ್ಮವನ್ನು ಮಾತ್ರ ಕಂಡ ಕಂಡವರಲ್ಲಿ ತೆಗೆದುಕೊಳ್ಳಬಾರದು. ಪ್ರಸಿದ್ಧವಾದ ಔಷಧಾಲಯದಲ್ಲಿಯಾಗಲಿ ವಿಶ್ವಾಸಿಯಾದ ವೈದ್ಯನಲ್ಲಿಯಾಗಲಿ ಕ್ರಮವಾಗಿ ಮಾಡಿದ ಭಸ್ಮವನ್ನೇ ಸಂಗ್ರಹಿಸಬೇಕು ಅಶುದ್ಧವಾದ ಭಸ್ಮವು ಲಾಭಕ್ಕೆ ಬದಲು ಹಾನಿಯನ್ನೇ ಉಂಟು ಮಾಡುತ್ತದೆ.

೬. ಬಿಳಿಯ ಅಥವಾ ನೀಲಿಯ ವಿಷ್ಣುಕ್ರಾಂತಿಯ ಬೇರು, ನುಗ್ಗೆಯ ಸೊಪ್ಪು,ಸಾಸಿವೆ,ಇವುಗಳನ್ನು ಗೋಮೂತ್ರದೊಡನೆ ಅರೆದು ಲೇಪಿಸುವುದರಿಂದ ಬಹುದಿನಗಳ ಗಂಡಮಾಲೆಯು ಗುಣವಾಗುತ್ತದೆ. ಹೊಟ್ಟೆಗೆ—ಕಂಚುವಾಳದ ಮರದ ಒಳಗಿನ ಚಕ್ಕೆಯನ್ನು ತಂದು ಕುಟ್ಟಿ ಕಷಾಯವನ್ನು ಮಾಡಿಕೊಂಡು ಆ ಕಷಾಯಕ್ಕೆ "ಶುಂಠಿ"ಯ ಚೂರ್ಣವನ್ನು ಕೂಡಿಸಿ ಕುಡಿಯಬೇಕು. ಇವೆರಡು ಪ್ರಯೋಗಗಳೂ ಸೇರಿದರೆ ಬಹುಬೇಗನೆ ಗಂಡಮಾಲೆ ಅಥವಾ ಗಲಗಂಡವು ಗುಣವಾಗುತ್ತದೆ. ಅಥವಾ ಕಂಚುವಾಳದ ತೊಗಟೆಯನ್ನು, ಅಕ್ಕಿಯನ್ನು ತೊಳೆದ ನೀರಿನಲ್ಲಿ ಅರೆದು ಶುಂಠಿಯ ಚೂರ್ಣವನ್ನು ಕೂಡಿಸಿ ಕುಡಿಯಬಹುದು. ಇವೆಲ್ಲವೂ ಪರೀಕ್ಷಿಸಲ್ಪಟ್ಟಿವೆ.

೭. ವಿಷ್ಣುಕ್ರಾಂತಿಯ ಬೇರು ೨ ತೊಲವನ್ನು ತಂದು ಅರೆದು ಕಲ್ಲುಸಕ್ಕರೆ, ಜೇನುತುಪ್ಪವನ್ನು ಕೂಡಿಸಿ ಪ್ರತಿದಿನದ ಪ್ರಾತಃಕಾಲದಲ್ಲಿ ೭ ದಿನಗಳವರೆಗೆ ಸೇವಿಸುತ್ತಿದ್ದರೆ ಪರಿಣಾಮತೂಲೆಯು (ಆಹಾರವು ಪಚನವಾಗುತ್ತಿರುವಾಗ ಬರುವ ಹೊಟ್ಟೆಶೂಲೆ) ಗುಣವಾಗುತ್ತದೆ.

---

**ದಂಟಿನಸೊಪ್ಪು** :—ಉದ್ದವಾದ ನಾಳವುಳ್ಳ ದಂಟಿನಲ್ಲಿ ಕೆಂಪು ಹಸರು ಬಣ್ಣದ ೨ ಜಾತಿಗಳಿವೆ. ಕೆಂಪು ಜಾತಿಯ ದಂಟು ಕೆಂಪು ಚುಕ್ಕೆಗಳುಳ್ಳ ಎಲೆಗಳಿಂದ ಕೂಡಿರುತ್ತದೆ. ಮತ್ತೊಂದು ಚುಕ್ಕೆಗಳಿಲ್ಲದೆ ಹಸುರಾಗಿಯೇ ಇರುತ್ತದೆ. ಇದರಲ್ಲಿಯೇ ಇನ್ನೊಂದು ವಿಧ ದಂಟಿಲ್ಲದ ಚಿಕ್ಕಜಾತಿಯ ಸೊಪ್ಪಿದೆ ಗುಣದಲ್ಲಿ ಸಾಮಾನ್ಯವಾಗಿ ಎರಡೂ ಒಂದೇ ವಿಧವಾಗಿವೆ. ಈ ಸೊಪ್ಪು ಮತ್ತು ದಂಟು, ತಂಪು ಗುಣವುಳ್ಳದು, ಮೇಹವ್ಯಾಧಿಯನ್ನು ಶಾಂತಿಗೊಳಿಸುವುದು, ಗಂಟಲಿನಿಂದ ಬೀಳುವ ರಕ್ತ ಮತ್ತು ಬಹುದಿನದ ಅತಿಸಾರ ಇವೆರಡನ್ನು ತಡೆಯುವುದು, ಅತಿಯಾಗಿ ಹೋಗುತ್ತಿರುವ ಸ್ತ್ರೀ ರಜಸ್ಸನ್ನು ತಡೆಯುವುದು, ಮೂಳೆಗಳಲ್ಲಿನ ಉಷ್ಣತೆಯನ್ನು ಕಡಿಮೆ ಮಾಡುವುದು, ಆಗಿಂದಾಗ ಬರುತ್ತಿರುವ ಜ್ವರವನ್ನು ತಡೆಯುವುದು, ಬೇರು ಸಹಿತವಾದ ಇದರ ಕಷಾಯದಿಂದ ಮೂಲವ್ಯಾಧಿಯು ಶಾಂತವಾಗುವುದು, ಇದರ ಎಲೆಗಳನ್ನು ಅರೆದು ಕಟ್ಟುವುದರಿಂದ ಗಾಯಗಳು ಮತ್ತು,

ಹುಣ್ಣುಗಳು ಮಾಯುವುವು, ಆದರೆ ಇದು ಪ್ಲೀಹದ (ಸ್ಪ್ಲೀನ್) ವಿಕಾರವುಳ್ಳವರಿಗೆ ಹಿತಕರವಲ್ಲ ಮತ್ತು ಇದನ್ನುಹೆಚ್ಚಾಗಿ ಸೇವಿಸುವುದ ರಿಂದ ಪ್ಲೀಹಕ್ಕೆ ಕೆಡಕುಂಟಾಗುತ್ತದೆ ಮತ್ತು ಕಣ್ಣುಗಳಿಗೆ ಹಿತಕರವಲ್ಲ.

**ಚಕ್ರೋತ ಸೊಪ್ಪು** :—ಉಷ್ಣಗುಣದಿಂದ ಕೂಡಿರುವ ಈ ಸೊಪ್ಪು ಅಗ್ನಿಮಾಂದ್ಯವನ್ನು ದೂರಮಾಡಿ ರುಚಿಯನ್ನು ಹುಟ್ಟಿಸು ವುದು, ಆಮ (ಅರಗದಿರುವ ಆಹಾರದ ಭಾಗ) ವಿಕಾರವನ್ನು ನಾಶ ಮಾಡುವುದು, ಹಸಿವನ್ನು ಹೆಚ್ಚಿಸುವುದು, ಸಂಗ್ರಹಣಿ, ಕುಷ್ಠ, ಮೂಲವ್ಯಾಧಿ ಮುಂತಾದ ರೋಗಗಳಿಗೆ ಹಿತಕರವಾದುದು. ಮಲ ಬದ್ಧತೆಯನ್ನು ನಿವಾರಿಸತಕ್ಕ ಸ್ವಭಾವವು ಇದರಲ್ಲಿ ಹೆಚ್ಚಾಗಿಲ್ಲ ಇದೇ ಜಾತಿಯಲ್ಲಿಯೇ ಇನ್ನೊಂದು ಹುಳಿರಸದಿಂದ ಕೂಡಿರುವುದು ಹುಳಿ ಚಕ್ರೋತ ಅಥವಾ ಚುಕ್ಕೆಸೊಪ್ಪು ಎಂದಿದೆ. ಇದೂ ಉಷ್ಣಗುಣ ವುಳ್ಳುದು ಮತ್ತು ಅಗ್ನಿದೀಪಕವಾದುದು, ಶೂಲರೋಗ, ಎದೆಯ ಬೇನೆ, ಮಲಬದ್ಧತೆ, ವಾಂತಿ,ಗುಲ್ಮ, ವಾತ, ನಾಲಗೆಯ ಅರೋಚಕತೆ. ಇವುಗಳನ್ನು ಶಾಂತಗೊಳಿಸುತ್ತದೆ.

**ಗೋಣಿಸೊಪ್ಪು** :—ಹುಳಿರಸದಿಂದ ಕೂಡಿರುವ ಈ ಸೊಪ್ಪು ತ್ರಿದೋಷ ನಾಶಕವಾದುದು, ಸಂಗ್ರಹಣಿ-ಕುಷ್ಠ-ಮೂತ್ರನಾಳದ ಕಲ್ಲು-ಮೂಲವ್ಯಾಧಿ ಮುಂತಾದ ರೋಗಗಳನ್ನುಶಾಂತಗೊಳಿಸುವುದು, ರಕ್ತವನ್ನು ಶುದ್ಧಗೊಳಿಸುವುದು, ಉಷ್ಣದ ಕೆಮ್ಮಲಿಗೆ ಗುಣಕಾರಿ ಯಾದುದು, ಪಿತ್ತದಿಂದ ಆಗತಕ್ಕ ಭೇದಿಯನ್ನು ನಿಲ್ಲಿಸುವುದು,ಪಿತ್ತ-ಜ್ವರ ಮತ್ತು ರಕ್ತದ ವಾಂತಿಯನ್ನು ತಗ್ಗಿಸುವುದು, ಮೇಹವ್ಯಾಧಿ ಯವರಿಗೆ ಹಿತಕರವಾದುದು. ಹೆಚ್ಚಾಗಿ ತಿನ್ನುವುದರಿಂದ ಕಫವು ಹೆಚ್ಚಾಗುತ್ತದೆ.

**ಹಿರೇಕಾಯಿ** —ಶೀತಗುಣವುಳ್ಳ ಈ ಕಾಯಿಯು ಪಿತ್ತ ಅಥವಾ ಉಷ್ಣದಿಂದ ಹುಟ್ಟಿದ ರೋಗಗಳಿಗೆ ಹಿತಕರವಾಗಿದೆ; ವಾತ ಮತ್ತು ಪಿತ್ತ ವಿಕಾರವನ್ನು ಶಾಂತಗೊಳಿಸುವುದು, ಜಠರಾಗ್ನಿಯನ್ನು ಹೆಚ್ಚಿಸು ವುದು, ಪುರುಷತ್ವವನ್ನು ವೃದ್ಧಿಗೊಳಿಸುವುದು, ಹೊಟ್ಟೆಯಲ್ಲಿನ

ವಿಕಾರಗಳಿಗೆಲ್ಲಾ ವಿಶೇಷ ಪ್ರಯೋಜನಕಾರಿಯಾದುದು, ಕುಷ್ಠ-ಮೇಹವ್ಯಾಧಿ-ಕ್ಷಯ-ಉಷ್ಣದ ದಮ್ಮು-ಅರುಚಿ-ಪಿತ್ತಜ್ವರ-ಕಫದವಿಕಾರ ಪಿತ್ತದ ಭೇದಿ ಇವುಗಳನ್ನು ಶಮನಗೊಳಿಸುತ್ತದೆ. ಈ ಕಾಯಿಯು ಸರ್ವಸಾಧಾರಣವಾಗಿ ಎಲ್ಲರಿಗೂ ಪಥ್ಯವಾಗಿದೆ.

ಇದರಲ್ಲಿಯೇ ಕಹಿಯಾಗಿರುವ ಹಿರೇಕಾಯಿಯೂ ಒಂದು ವಿಧವಾಗಿದೆ. ಔಷಧಿಗಳಿಗೆ ಇದರ ಬೇರು ಮತ್ತು ಎಲೆಗಳು ವಿಶೇಷವಾಗಿ ಉಪಯೋಗಿಸಲ್ಪಡುತ್ತವೆ.

ಈ ಹೀರೇಕಾಯಿಯಲ್ಲಿಯೇ ಏಣುಗಳಿಲ್ಲದ ಒಂದು ಜಾತಿಯು ,,ತುಪ್ಪ ಹಿರೇಕಾಯಿ" ಎಂದು ಬಹಳ ಪ್ರಸಿದ್ಧವಾಗಿದೆ. ಇತ್ತೀಚೆಗೆ ಈ ತರಕಾರಿಯೇ ಎಲ್ಲಿಯೂ ಕಾಣಿಸುತ್ತಿಲ್ಲ. ಕಾಲಪರಿವರ್ತನೆಯಿಂದ ಎಷ್ಟೋ ಹಳೆಯ ತರಕಾರಿಗಳು ಮಾಯವಾಗಿವೆ ಎಷ್ಟೋ ಹೊಸ ತರಕಾರಿಗಳು ಜನ್ಮಿಸಿವೆ. ಟೊಮೇಟೋ ಎಂಬ ಕಾಯಿಯು ಮೊದಲು ಬಹಳ ಅಪರೂಪವಾಗಿದ್ದಿತು ಮತ್ತು ಅದನ್ನು ಯಾರೂ ವಿಶೇಷವಾಗಿ ತಿನ್ನುತ್ತಿರಲಿಲ್ಲ. ಈಗ ಎಲ್ಲಿ ನೋಡಿದರಲ್ಲಿ ಕಂಡು ಬರುತ್ತಿದೆ. ಗ್ರಾಹಕರು ಹೆಚ್ಚಾದಂತೆಲ್ಲಾ ಇದರ ಬೆಲೆಯೂ ಏರಿ ಹೋಗಿರುತ್ತದೆ.

ತುಪ್ಪ ಹಿರೇಕಾಯಿಯು ಬಹಳ ರುಚಿಕರ ಮತ್ತು ಪಥ್ಯವಾದ ತರಕಾರಿಯಾಗಿದೆ ಕಾಶಿಯಲ್ಲಂತೂ ಇದರ ಬೆಳೆಯು ಬಹಳ ಹೆಚ್ಚಾಗಿದೆ ಮತ್ತು ಇದನ್ನು ತಿನ್ನುವ ರೂಢಿಯೂ ಹೆಚ್ಚಾಗಿದೆ. ಗುಣದಲ್ಲಿ ಏಣುಗಳಿರುವ ಹೀರೇಕಾಯಿಯಂತೆಯೇ ಇರುತ್ತದೆ. ಗಾಯಗೊಂಡವರಿಗೆ ಮತ್ತು ಮೂಗು, ಬಾಯಿ, ಆಸನ, ಮುಂತಾದ ದ್ವಾರಗಳಿಂದ ರಕ್ತವು ಬೀಳುತ್ತಿದ್ದರೆ ಇದರ ಪಲ್ಯವು ಬಹಳ ಲಾಭವನ್ನೀಯುತ್ತದೆ. ಇದು ಬಲಕಾರಿಯೂ ಆಗಿರುತ್ತದೆ. ತುಪ್ಪಹಿರೇಯ ಎಲೆಗಳನ್ನು ಅರೆದು ಹುಣ್ಣುಗಳ ಮೇಲೆ ಕಟ್ಟಿದರೆ ಹುಣ್ಣುಗಳು ಮಾಯುತ್ತವೆ.

೧. ಕಹಿ ಹಿರೇಯ ಬೀಜಗಳೊಳಗಿನ ಪೊಪ್ಪುಗಳನ್ನು ಶುದ್ಧವಾದ ಎಳ್ಳೆಣ್ಣೆಯಲ್ಲಿ ಅರೆದು ಕಣ್ಣುಗಳಿಗೆ ಹಚ್ಚುವುದರಿಂದ ಪರೆಯು ಕತ್ತರಿಸುತ್ತದೆ.

೨. ಕಹಿ ಹೀರೆಯಕಾಯಿಗಳನ್ನು ತಂದು ಮೇಲಿನ ಸಿಪ್ಪೆಯನ್ನು ಕೆರೆದುಹಾಕಿ ೨ ತೊಲ ತಿರುಳನ್ನು ೧ ಪಾವು ನೀರಿನಲ್ಲಿ ೧ ಗಂಟೆಯಕಾಲ ನೆನೆಹಾಕಿದ್ದು, ಅನಂತರ ಕಿವಿಚಿ ಶೋಧಿಸಿಕೊಂಡು ಸಾಧ್ಯವಾದಷ್ಟನ್ನು ೫ ದಿನಗಳ ವರೆಗೆ ಕುಡಿಯುವುದರಿಂದ ಭೇದಿ ಮತ್ತು ವಾಂತಿಯ ಮೂಲಕ ಹುಚ್ಚುನಾಯಿಯು ಕಡಿಯುವುದರಿಂದುಂಟಾದ ವಿಷವು ನಾಶವಾಗುತ್ತದೆ. ಈ ಪ್ರಯೋಗವನ್ನು ಅಲಹಾಬಾದಿನ ಒಬ್ಬ ಅನುಭವಿಗಳಾದ ವೈದ್ಯರು ೨-೩ ಸಲ ಪರೀಕ್ಷಿಸಿರುತ್ತಾರೆ. ಇದರಿಂದ ಮಹಾ ಭಯಂಕರವಾದ ಹುಚ್ಚುನಾಯಿಯ ವಿಷವೂ ಇಳಿದುಹೋಗಿದೆಯೆಂದು ಅವರೇ ಹೇಳಿರುವರು.

೩. ಹೀರೇಗಿಡದ ಬೇರನ್ನುಅರೆದು ಮೂಲವ್ಯಾಧಿಯ ಮೊಳಕೆಗಳಿಗೆ ಹಚ್ಚುವುದರಿಂಡ ಕೆಲವು ದಿನಗಳೊಳಗೆ ಮೊಳಕೆಗಳು ನಾಶವಾಗುತ್ತವೆ. ಈ ಕೆಲಸಕ್ಕೆ ಸಿಹಿಯಾಗಲಿ ಕಹಿಯಾಗಲಿ ಯಾವ ಹೀರೆಯಾದರೂ ಆಗಬಹುದು.

೪. ಹೀರೇ ಕಾಯಿಗಳನ್ನು ಒಣಗಿಸಿ ಕುಟ್ಟಿ ಶೋಧಿಸಿಕೊಳ್ಳಬೇಕು, ಅನಂತರ ಅರಶಿನವನ್ನು ಕುಟ್ಟಿ ಶೋಧಿಸಿಕೊಳ್ಳಬೇಕು, ಆ ಮೇಲೆ ಈ ೨ ಚೂರ್ಣಗಳಿಗೆ ಸೈಂಧವಲವಣದ ಚೂರ್ಣವನ್ನು ಸೇರಿಸಿ ಇಟ್ಟುಕೊಳ್ಳಬೇಕು. ಮೂರು ಚೂರ್ಣಗಳೂ ಸಮವಾಗಿರಬೇಕು. ಈ ಚೂರ್ಣತ್ರಯವನ್ನು ಗೋಮೂತ್ರದೊಡನೆ ಕೂಡಿಸಿ ಮೂಲವ್ಯಾಧಿಯ ಮೊಳಕೆಗಳಿಗೆ ಲೇಪಿಸುತ್ತಿದ್ದರೆ ಕೆಲವು ದಿನಗಳಲ್ಲಿ ಮೊಳಕೆಗಳು ಕರಗಿ ಹೋಗುತ್ತವೆ. ಈ ಪ್ರಯೋಗಕ್ಕೂ ಯಾವ ಹೀರೇಕಾಯಿಯಾದರೂ ಆಗಬಹುದು.

೫. ಕಹಿ ಹೀರೇಕಾಯಿಗಳನ್ನು ಕುಟ್ಟಿ ಕಷಾಯವನ್ನು ಮಾಡಿ ಶೋಧಿಸಿಕೊಂಡು ತುಪ್ಪವನ್ನು ಕೂಡಿಸಿ ಕುಡಿಸುವುದರಿಂದ ವಾಂತಿಯ ಮೂಲಕ ಸರ್ಪದ ವಿಷವು ಇಳಿದು ಹೋಗುತ್ತದೆ.

೬. ಕಹಿ ಹೀರೇ ಕಾಯಿಯನ್ನು ನೀರಿನೊಡನೆ ಅರೆದು ಬಟ್ಟೆಯಿಂದ ಶೋಧಿಸಿಕೊಂಡು ಮೂರ್ಛೆರೋಗ ಬಂದವರ ಮೂಗಿಗೆ ೪-೫ ಹನಿ ರಸವನ್ನು ಹಾಕಿದರೆ ಕೂಡಲೇ ಪ್ರಜ್ಞೆಯು ಹಿಂದಿರುಗು

ತ್ತದೆ. ಇಂತಹ ಕೆಲಸಗಳಿಗೆ ಈ ರಸವು ಅದ್ಭುತವಾದ ಫಲವನ್ನು ಕೊಡುತ್ತದೆ. ಪರೀಕ್ಷಿಸಲ್ಪಟ್ಟಿದೆ.

---

**ಹಾಗಲಕಾಯಿ :** — ಶೀತ, ಬೇಗನೆ ಪಚನವಾಗುವುದು ವಿಶೇಷ ವಾತಕರವಾದುದಲ್ಲ. ಭೇದಿಯನ್ನು ಸರಿಯಾಗಿ ಮಾಡಿಸುವುದು, ಜ್ವರ-ಪಿತ್ತ-ಕಫ-ರಕ್ತವಿಕಾರ-ಪಾಂಡು-ಮೇಹ-ಕ್ರಿಮಿ-ಕೆಮ್ಮು-ದಮ್ಮು-ಕುಷ್ಠ-ಉದರ ರೋಗಗಳನ್ನು ಶಾಂತಗೊಳಿಸುವುದು ಮತ್ತು ಕಣ್ಣುಗಳಿಗೆ ತಂಪನ್ನುಂಟುಮಾಡುವುದು, ಜಠರಾಗ್ನಿಯನ್ನು ಹೆಚ್ಚಿಸುವುದು, ವೀರ್ಯಸ್ತಂಭನಕಾರಿಯಾದುದು, ಮತ್ತು ಅತಿಸಾರ, ಶ್ಲೇಷ್ಮ ಮೂಲವ್ಯಾಧಿ, ಕ್ರಿಮಿರೋಗಗಳಿಗೆ ವಿಶೇಷ ಲಾಭಕರವಾದುದು. ಈ ಕಾಯಿ ಮತ್ತು ಇದರ ಎಲೆಗಳಲ್ಲಿ ಅನೇಕ ರೋಗಗಳನ್ನು ನಾಶಪಡಿಸುವ ಶಕ್ತಿಯು ಇರುತ್ತದೆ. ಸಕಲ ರೋಗಿಗಳಿಗೂ ಪಥ್ಯವಾಗಿದೆ. ಈ ಕಾಯಿಯು ಬಿಳುಪು ಮತ್ತು ಕೆಂಪುಬಣ್ಣದಿಂದ ೨ ವಿಧವಾಗಿದೆ ಇವೆರಡರಲ್ಲಿ ಬಿಳಿಯದೇ ಉತ್ತಮವಾದುದು. ಇದರಲ್ಲಿರತಕ್ಕ ಕಹಿರಸವು ಅನೇಕವಿಧ ವಿಷಗಳ ಶಕ್ತಿಯನ್ನು ಮರ್ದನಮಾಡುತ್ತದೆ.

೧ ಹಾವು ಕಡಿದ ಕೂಡಲೇ ಈ ಎಲೆಗಳ ರಸವನ್ನು ತೆಗೆದು ಕುಡಿಸಿದರೆ ವಾಂತಿಯಾಗಿ ಹಾವಿನ ವಿಷವು ಇಳಿಯುತ್ತದೆ.

೨ ಹಾಗಲ ಎಲೆಗಳ ರಸ ಅರ್ಧಪಾವು, ಕೊಬರಿಯ ಎಣ್ಣೆ ಒಂದು ಚಟಾಕು, ಬೇವಿನ ಎಲೆ ಐದುತೊಲ ಮತ್ತು ಕ್ವಿನೈನ್ ೨೦ ಗ್ರೈನ್, ಇವುಗಳನ್ನೆಲ್ಲಾ ಒಟ್ಟುಗೂಡಿಸಿ ಅರೆದು ಹಚ್ಚಿದರೆ ಎಂತಹ ನವೆಯಾದರೂ ಬಹುಬೇಗನೆ ನಾಶವಾಗುತ್ತದೆ. ಹುಳುಕಡ್ಡಿ, ಗಜಕರ್ಣ ಇಸಬು, ಮುಂತಾದ ಚರ್ಮರೋಗಗಳಿಗೂ ಇದು ದಿವ್ಯೌಷಧವಾಗಿದೆ. ಪರೀಕ್ಷಿಸಲ್ಪಟ್ಟಿದೆ.

೩ ಹಾಗಲ ಎಲೆಯ ರಸ ಕಾಲು ತೊಲ, ದಾಳಿಂಬರೆ ಎಲೆಯ ರಸ ಕಾಲುತೊಲ, ಆಡಿನ ಹಾಲು ಒಂದು ತೊಲ, ಈ ಮೂರನ್ನು ಮಣ್ಣಿನ ಅಥವಾ ಕಲ್ಲಿನ ಪಾತ್ರೆಯಲ್ಲಿ ಮಿಶ್ರಮಾಡಿ, ಆ ರಸದಲ್ಲಿ ಅರಳೆಯನ್ನು ತೋಯಿಸಿ-ತೋಯಿಸಿ ಹೊಕ್ಕಳದ ಮೇಲಿಟ್ಟರೆ ಸಕಲವಿಧ ಅತಿಸಾರವೂ ನಿಂತುಹೋಗುತ್ತದೆ.

೪. ಹಾಗಲಕಾಯಿ ಅಥವಾ ಎಲೆಯ ರಸವನ್ನು ತೆಗೆದು ೨ ತೊಲ ರಸಕ್ಕೆ ೧ ತೊಲ ಕಲ್ಲುಸಕ್ಕರೆಯನ್ನುಕೂಡಿಸಿ ೭ ದಿನಗಳವರೆಗೆ ಪ್ರತಿದಿನದ ಪ್ರಾತಃಕಾಲದಲ್ಲಿಯೇ ಕುಡಿಯುತ್ತಿದ್ದರೆ ರಕ್ತಮೂಲವು ಖಂಡಿತ ಗುಣವಾಗುತ್ತದೆ. ಅನೇಕಸಾರಿ ಪರೀಕ್ಷಿಸಲ್ಪಟ್ಟಿದೆ.

೫. ಹಾಗಲಕಾಯಿ ಅಥವಾ ಹಾಗಲ ಎಲೆಯ ರಸಕ್ಕೆ ಸ್ವಲ್ಪ ಜೇನುತುಪ್ಪವನ್ನು ಕೂಡಿಸಿ ಕುಡಿಯುವುದರಿಂದ ಯಕೃತ್ತಿನ (ಲೀವರ್) ವಿಕಾರವು ಶಾಂತವಾಗುತ್ತದೆ.

೬. ಶರೀರದ ಯಾವ ಭಾಗದಿಂದಲೇ ಆಗಲಿ ರಕ್ತವು ಸೋರುತ್ತಿದ್ದರೆ, ಹಾಗಲದ ಎಲೆಗಳನ್ನು ಆಗಿಂದಾಗಲೇ ಅರೆದು ಅದಕ್ಕೆ ಸ್ವಲ್ಪ ಸುಣ್ಣವನ್ನು ಕೂಡಿಸಿ ಹಚ್ಚುವುದರಿಂದ ರಕ್ತವು ನಿಂತುಹೋಗುತ್ತದೆ. ಕತ್ತಿ, ಚಾಕು, ಮುಂತಾದುವುಗಳು ತಗಲಿ ಗಾಯವಾಗಿ ರಕ್ತವು ಸೋರುತ್ತಿದ್ದರೆ, ಹಾಗಲಕಾಯಿಗಳ ರಸವನ್ನು ಹಚ್ಚಿದರೆ ರಕ್ತವು ಕೂಡಲೇ ನಿಂತುಹೋಗುತ್ತದೆ.

೭. ಹಾಗಲಕಾಯಿಯ ರಸವನ್ನು ತೆಗೆದು ಅದರಲ್ಲಿ ಸಮಭಾಗದ ಈರುಳ್ಳಿಯ ರಸವನ್ನು ಕೂಡಿಸಿ ಕಾಲರಾದ ರೋಗಿಗೆ ಕಾಲು ಕಾಲು ಗಂಟೆ ಅಥವಾ ಅರ್ಧ ಅರ್ಧ ಗಂಟೆಗೆ ಒಂದೊಂದು ಚಮಚದಷ್ಟು ಕುಡಿಸುತ್ತಿದ್ದರೆ ರೋಗವು ಬಹುಬೇಗನೆ ಹಿಮ್ಮೆಟ್ಟುತ್ತದೆ. ಕಾಲರಾದ ಸಮಯದಲ್ಲಿ ಹಾಗಲಕಾಯಿಯನ್ನು ಹೆಚ್ಚಾಗಿ ತಿನ್ನುವುದುತ್ತಮ. ಅಂತಹ ಸಮಯದಲ್ಲಿ ದಿನಕ್ಕೊಂದು ಸಾರಿಯಾದರೂ ಹಾಗಲಕಾಯಿ ಮತ್ತು ಈರುಳ್ಳಿಯ ರಸಗಳನ್ನು ಕೂಡಿಸಿ ಸ್ವಲ್ಪ ಸಕ್ಕರೆಯನ್ನು ಹಾಕಿ ಕುಡಿಯುತ್ತಿದ್ದರೆ, ಕಾಲರಾ ರೋಗದ ಭಯವು ಇರುವುದಿಲ್ಲ. ಆಕ್ರಮಣವಾದನಂತರದಲ್ಲಿಯೂ ಇದನ್ನೇ ಕುಡಿಸುತ್ತಿರುವುದು ವಿಶೇಷ ಫಲಕಾರಿಯಾಗಿರುತ್ತದೆ.

೮. ಹಾಗಲ ಎಲೆಗಳ ರಸಕ್ಕೆ ಸ್ವಲ್ಪ ಮೊಸರನ್ನು ಕೂಡಿಸಿ ಶರೀರಕ್ಕೆ ಹಚ್ಚಿ ೧ ಗಂಟೆಯ ನಂತರ ಸ್ನಾನಮಾಡಬೇಕು. ಇದರಿಂದ ಮೈಮೇಲೆದ್ದಿರುವ ಪಿತ್ತದ ಗಂಡೆಗಳು ನಾಶವಾಗುವುವು.

೯ ಹಾಗಲಕಾಯಿ, ದೊಡ್ಡಪತ್ರೆಯ ಎಲೆ, ಕೊತ್ತುಂಬರಿಯ ಬೀಜ, ಕಸ್ತೂರಿ ಅರಶಿನ, ಕಚೋರ, ಇವುಗಳನ್ನು ಸಮಭಾಗವಾಗಿ ನುಣ್ಣಗೆ ಅರೆದು ಗೋಮೂತ್ರದಲ್ಲಿ ಅಥವಾ ಮೊಸರಿನಲ್ಲಿ ಕೂಡಿಸಿ ಲೇಪಿಸಿ ಸ್ವಲ್ಪ ಹೊತ್ತಾದನಂತರ ಸ್ನಾನಮಾಡುತ್ತಿದ್ದರೆ,ನವೆ ಹುಳಕಡ್ಡಿ ಗಜಕರ್ಣ ಮುಂತಾದ ಚರ್ಮರೋಗಗಳು ಜನ್ಮಾಂತರದವುಗಳಾಗಿದ್ದರೂ ಸ್ವಲ್ಪ ದಿನಗಳಲ್ಲಿಯೇ ಮಾಯವಾಗುತ್ತವೆ.

೧೦. ಹಾಗಲ ಎಲೆಯ ರಸ ೨ ಸೇರು, ಬೇವಿನ ಎಲೆಯ ರಸ ೨ ಸೇರು, ಮೊಸರು ೨ ಸೇರು, ಈ ಮೂರು ರಸಗಳನ್ನು ಸಿದ್ಧಮಾಡಿಕೊಂಡು ಅದರಲ್ಲಿ ೧॥ ಸೇರು (ಅಳತೆ) ಶುದ್ಧವಾದ ಎಳ್ಳೆಣ್ಣೆಯನ್ನು ಕೂಡಿಸಿ ಒಂದು ಪಾತ್ರೆಯಲ್ಲಿ ಹಾಕಿ ಒಲೆಯಮೇಲಿಟ್ಟು ಮಂದಾಗ್ನಿಯಿಂದ ಕಾಯಿಸಬೇಕು. ಕಾಯುತ್ತಿರುವಾಗ ೩ ತೊಲ ಬಾವಂಚಿ ಬೀಜ, ೩ ತೊಲ ಕಚೋರ, ೩ ತೊಲ ಅರಶಿನ, ೩ ತೊಲ ಕಸ್ತೂರಿ ಅರಶಿನ, ೩ ತೊಲ ಚಿರಾಯತ, ೩ ತೊಲ ಹೊಂಗೆಯ ಬೀಜ, ೩ ತೊಲ ವಾಯುವಿಳಂಗ, ೨ ತೊಲ ಕರ್ಪೂರ, ಇವುಗಳನ್ನೆಲ್ಲಾ ನೀರಿನೊಡನೆ ಅರೆದು ಹಾಕಬೇಕು. ರಸ ಮತ್ತು ಮೊಸರು ಇಂಗಿದ ಮೇಲೆ ಕೆಳಗಿಳಿಸಿ ಆರಿದನಂತರ ಶೋಧಿಸಿಕೊಳ್ಳಬೇಕು. ಕರ್ಪೂರ ಮತ್ತು ಕಚೋರ ಇವೆರಡನ್ನು ಮಾತ್ರ ಪ್ರತ್ಯೇಕವಾಗಿ ಕುಟ್ಟಿ ಆ ಪುಡಿಯನ್ನು ಎಣ್ಣೆಯನ್ನು ಕೆಳಗಿಳಿಸುವಾಗ ಹಾಕಬೇಕು. ಈ ಎಣ್ಣೆಯನ್ನು ಮೈಗೆ ಹಚ್ಚಿ ಚೆನ್ನಾಗಿ ತಿಕ್ಕಿ ೧ ಗಂಟೆಯ ನಂತರ ಸ್ನಾನಮಾಡಿದರೆ ಕೆಲವು ದಿನಗಳಲ್ಲಿಯೇ ಎಂತಹ ಅಸಾಧ್ಯವಾದ ಚರ್ಮರೋಗವಾದರೂ ಖಂಡಿತವಾಗಿ ನಿರ್ಮೂಲವಾಗುತ್ತದೆ. ಸ್ನಾನಕಾಲದಲ್ಲಿ ಸಾಬೂನಿಗೆ ಬದಲು ಬೇಳೆಗಳ ಉಪಯೋಗ ವಿಶೇಷದಲ್ಲಿ ಬರೆದಿರುವ ಸ್ನಾನಚೂರ್ಣವನ್ನೇ ಉಪಯೋಗಿಸುವುದರಿಂದ ಬಹುಬೇಗನೆ ಚರ್ಮರೋಗಗಳೆಲ್ಲವೂ ಗುಣವಾಗುತ್ತವೆ.

೧೧. ಹಾಗಲ ಎಲೆಗಳ ರಸದಲ್ಲಿ ಅರಶಿನದ ಪುಡಿಯನ್ನು ಕೂಡಿಸಿ ತಿನ್ನುವುದರಿಂದ ಸಕಲ ವಿಧ ಸಿಡುಬು ಮತ್ತು ಅವುಗಳಿಂದುಂಟಾಗುವ ಜ್ವರವೂ ನಾಶವಾಗುತ್ತದೆ. ಈ ಪ್ರಯೋಗದಿಂದ ಒಳಗಡೆಯಲ್ಲಿ ಗುಪ್ತವಾಗಿರುವ ಸಿಡುಬು ಹೊರಕ್ಕೆ ಬಂದುಬಿಡುತ್ತದೆ.

ಮತ್ತು ಹಾಗಲಕಾಯಿ, ಅರಶಿನ ಇವೆರಡನ್ನೂ ಒಟ್ಟುಗೂಡಿಸಿ ಅರೆದು ಬಟ್ಟೆಯಲ್ಲಿ ಗಂಟುಕಟ್ಟಿ ಆ ಗಂಟನ್ನು ಸಿಡುಬಿನ ಗುಳ್ಳೆಗಳಮೇಲೆ ಸವರುತ್ತಿದ್ದರೆ ಒಳಗಡೆಗೆ ಹೋಗಿರುವ ಸಿಡುಬಿನ ಗಾಯದ ಗುಳ್ಳೆಗಳು ಹೊರಮುಖವಾಗುತ್ತವೆ.

೧೨. ಸಾಯಂಕಾಲವಾದನಂತರ ಕೆಲವರಿಗೆ ಕಣ್ಣುಗಳು ಕಾಣಿಸುವುದಿಲ್ಲ ಅಂತಹವರು, ಹಾಗಲ ಎಲೆಗಳ ರಸದಲ್ಲಿ ಮೆಣಸನ್ನು ತೇಯ್ದು ೭ ದಿನಗಳ ವರೆಗೆ ಕಣ್ಣುಗಳಿಗೆ ಹಚ್ಚುತ್ತಿದ್ದರೆ ರಾತ್ರಿಯ ಅಂಧತ್ವವು ನಿವಾರಣೆಯಾಗುತ್ತದೆ. ೪-೫ ದಿನಗಳೊಳಗೇ ಗುಣವು ಕಂಡುಬರುತ್ತದೆ. ಪರೀಕ್ಷಿಸಲ್ಪಟ್ಟಿದೆ.

೧೩. ಹಾಗಲಕಾಯಿಗಳನ್ನು ಕುಟ್ಟಿ ರಸವನ್ನು ತೆಗೆದು ಗೌರೀಪಾಷಾಣವನ್ನು ತಿಂದವರಿಗೆ ಕುಡಿಸಿದರೆ ವಾಂತಿಯಾಗಿ ಪಾಷಾಣದ ವಿಷವು ಇಳಿದುಹೋಗತ್ತದೆ. ಅಥವಾ ಸಕಾಲಕ್ಕೆ ಹಾಗಲ ಕಾಯಿಯು ದೊರೆಯದಿದ್ದರೆ ಬಿಳಿಯ ಬಣ್ಣದ ಕಾಚನ್ನು ಅರೆದು ನೀರಿನಲ್ಲಿ ಕೂಡಿಸಿ ಕುಡಿಸಿದರೂ ವಿಷವು ಇಳಿಯುತ್ತದೆ. ಈ ೨ ಪ್ರಯೋಗಗಳಿಂದ ಗೌರೀಪಾಷಾಣವನ್ನು ತಿಂದವರಲ್ಲಿ ಬಹಳ ಜನಗಳು ಬದುಕಿಕೊಂಡರೆಂದು ಒಬ್ಬ ಅನುಭವಿಗಳಾದ ವೈದ್ಯರು ಹೇಳಿರುತ್ತಾರೆ. ಆದರೆ ವಿಷವನ್ನು ತಿಂದೊಡನೆಯೇ ಈ ಪ್ರಯೋಗಗಳನ್ನು ಮಾಡಬೇಕಾದುದು ಅತ್ಯಾವಶ್ಯಕವಾಗಿದೆ.

---

**ಪಡವಲಕಾಯಿ** :—ಸಮವಾದ ಶೀತೋಷ್ಣ ಗುಣವುಳ್ಳುದು, ಶ್ಲೇಷ್ಮ ಮತ್ತು ಪಿತ್ತವಿಕಾರಗಳನ್ನು ಶಾಂತಗೊಳಿಸುವುದು, ಜ್ವರ-ಕೃಮಿರೋಗ-ಕೀಲುಗಳಲ್ಲಿ ಸೇರಿರುವ ವಾತ-ಇವುಗಳಿಂದ ಪೀಡಿತರಾದವರಿಗೆ ಹಿತಕರವಾದುದು ಮತ್ತು ಜಠರಾಗ್ನಿಯನ್ನು ವೃದ್ಧಿಗೊಳಿಸುವುದಲ್ಲದೆ ವೀರ್ಯ ಪುಷ್ಟಿಯನ್ನೂ ಉಂಟುಮಾಡುತ್ತದೆ. ಶರೀರದಲ್ಲಿ ಸೇರಿಕೊಂಡಿರುವ ಉಷ್ಣತೆಯನ್ನು ಕಡಿಮೆಮಾಡುತ್ತದೆ. ಇದೇ ಜಾತಿಯಲ್ಲಿಯೇ ತೊಂಡೆಕಾಯಿಯಂತಹ ಆಕಾರವುಳ್ಳ "ಪಟೋಲ" ವೆಂಬ ಕಾಯಿಯು ಉತ್ತರ ಭಾರತದಲ್ಲಿ "ಪರೋರ ಅಥವಾ ಪರವಲ್"

ಎಂಬ ಹೆಸರಿನಿಂದ ಬಹಳ ಪ್ರಸಿದ್ಧವಾಗಿದೆ. ಈ ಕಾಯಿಯು ತ್ರಿದೋಷ ನಾತಕವಾಗಿದ್ದು ಸಕಲ ವಿಧ ರೋಗಿಗಳಿಗೂ ಆಹಾರಕ್ಕೆ ಪಥ್ಯರೂಪ ವಾಗಿ ಕೊಡಲು ಯೋಗ್ಯವಾಗಿದೆ. ಮೇಲಿನ ಗುಣಗಳೆಲ್ಲವೂ ಈ ಕಾಯಿಯಲ್ಲಿಯೇ ವಿಶೇಷವಾಗಿರುತ್ತವೆ. ಇದನ್ನು ದಕ್ಷಿಣ ದೇಶದಲ್ಲಿ ಬೆಳೆಯಿಸುವುದಿಲ್ಲ. ಈ ಕಾಯಿಯಲ್ಲಿಯೇ "ಕಹಿಪಡವಲ"ವೆಂಬುದು ಔಷಧಿಗಳಿಗೆ ಉಪಯೋಗಿಸಲ್ಪಡತಕ್ಕದಾಗಿದೆ.

ಕಹಿಪಡವಲದ ಬೇರು ಮತ್ತು ಎಲೆ ಕಾಯಿಗಳು ಶ್ಲೇಷ್ಮಜ್ವರ, ವ್ರಣ, ಕುಷ್ಠ, ಕಣ್ಣುಗಳ ರೋಗ ಇವುಗಳನ್ನು ಶಾಂತಗೊಳಿಸು ತ್ತವೆ. ಇವುಗಳ ಚೂರ್ಣ ಅಥವಾ ಕಷಾಯದಿಂದ ಕಫ ಮತ್ತು ಪಿತ್ತ ಸಂಬಂಧವಾದ ವಿಕಾರಗಳು ಶಾಂತವಾಗುವುವು.

೧. ಕಹಿ ಪಡವಲದ ಎಲೆಗಳ ರಸದಲ್ಲಿ ಅರಶಿನ, ಕಸ್ತೂರಿ ಅರಶಿನ, ಕಚೋರ, ಬಾವಂಚಿ ಬೀಜ, ಇವುಗಳನ್ನು ಅರೆದು ಶರೀರಕ್ಕೆ ಹಚ್ಚಿ ೧ ಗಂಟೆಯ ನಂತರ ಸ್ನಾನವನ್ನು ಮಾಡಿದರೆ ಎಂಥಹ ಮೈನವೆ ಯಾದರೂ ಗುಣವಾಗುವುದು.

೨. ಇದರ ಎಲೆಗಳಲ್ಲಿ ಜ್ವರನಾಶಕ ಶಕ್ತಿಯು ಹೆಚ್ಚಾಗಿರುವು ದರಿಂದ ಎಲೆಗಳನ್ನು ನೀರಿನಲ್ಲಿ ಹಾಕಿ ಕಾಯಿಸಿ ಕಷಾಯವನ್ನು ಮಾಡಿಕೊಂಡು ಆರಿಸಿ ಸೈಂಧವಲವಣ ಮತ್ತು ಹಿಪ್ಪಲಿಯ ಚೂರ್ಣ ವನ್ನು ಹಾಕಿ ಕುಡಿಯುವುದರಿಂದ ಕಫದ ಜ್ವರವು ಶಾಂತವಾಗುತ್ತದೆ.

೩. ಕಹಿಪಡವಲದ ಎಲೆ, ಅಳಲೆಕಾಯಿ, ನೆಲ್ಲಿಚೆಟ್ಟು, ತಾರೇಕಾಯಿ, ತುಂಗೆಗಡ್ಡೆ, ತುಂಠಿ, ಮೆಣಸು, ಜೀರಿಗೆ, ಚಿತ್ರಮೂಲ, ಕಕ್ಕೆಕಾಯಿಯ ಬಂಕೆ, ಕಟುಕರೋಹಿಣಿ, ಈ ೧೧ ಪದಾರ್ಥಗಳು ಸೇರಿ ೨ ತೊಲವನ್ನು ಕುಟ್ಟಿ ಅರ್ಧಸೇರು ನೀರಿನಲ್ಲಿ ಹಾಕಿ ಕಷಾಯ ವನ್ನು ಮಾಡಿ ಅರ್ಧ ಚಟಾಕಿಗೆ ಇಳಿದನಂತರ ಶೋಧಿಸಿಕೊಂಡು ತಣ್ಣಗಾದಮೇಲೆ ಜೇನುತುಪ್ಪವನ್ನು ಕೂಡಿಸಿ ಕುಡಿಯಬೇಕು. ಇದರಿಂದ ಶ್ಲೇಷ್ಮಜ್ವರ, ಕೆಮ್ಮಲು ಮತ್ತು ಗಂಟಲಿನ ತೊಂದರೆ ಇವುಗಳು ನಾಶವಾಗುವುವು. ಇದು ಒಂದು ಹೊತ್ತಿನ ಕಷಾಯ.

೪. ಪಡವಲದ ಎಲೆ, ಆಡುಸೋಗೆ, ಅಮೃತಬಳ್ಳಿ, ಕಟುಕ ರೋಹಿಣಿ, ತ್ರಿಫಲ (ಅಳಲೆಕಾಯಿ, ನೆಲ್ಲಿಕಾಯಿ, ತಾರೇಕಾಯಿ) ಬಜೆ, ಇವುಗಳು ಸೇರಿ ೨ ತೊಲವನ್ನು ಕುಟ್ಟಿ ಕಷಾಯವನ್ನು ಮಾಡಿ ಆರಿದನಂತರ ಜೇನುತುಪ್ಪವನ್ನು ಕೂಡಿಸಿ ಕುಡಿದರೆ ಶ್ಲೇಷ್ಮಜ್ವರವು ಗುಣವಾಗುತ್ತದೆ.

ಕಷಾಯವನ್ನು ಯಾವಾಗಲೂ ಹೊಸ ಹೊಸದಾಗಿ ಮಾಡಿ ಕೊಂಡೇ ಕುಡಿಯಬೇಕು.

೫. ಕಹಿಪಡವಲದ ಎಲೆ, ಇಂದ್ರಯವೆ (ಕೊಡಸಿಗೆ ಬೀಜ) ದೇವದಾರು, ತ್ರಿಫಲ, ಬೀಜದದ್ರಾಕ್ಷಿ, ಅತಿಮಧುರ, ಅಮೃತಬಳ್ಳಿ, ಆಡುಸೋಗೆ, ಇವುಗಳ ಕಷಾಯವನ್ನು ಕುಡಿಯುವುದರಿಂದ, ಬಿಡದೆ ಬರುತ್ತಿರುವ ಜ್ವರ, ದಿನಕ್ಕೆರಡುಸಲ ಬಡುವ ಜ್ವರ, ೩ರ, ೫ರ, ೪ರ, ಜ್ವರಗಳು ಖಂಡಿತವಾಗಿ ಗುಣವಾಗುವುವು. ಪರೀಕ್ಷಿಸಲ್ಪಟ್ಟಿದೆ.

೬. ಕಹಿಪಡವಲದ ಎಲೆ, ಇಂದ್ರಯವೆ (ಕೊಡಸಿಗೆ ಬೀಜ) ಧನಿಯಾ, ಹಿಪ್ಪಲಿ, ನೆಲ್ಲಿಚೆಟ್ಟು, ಹಸಿಯ ತುಂಠಿ, ಇವೆಲ್ಲವೂ ಸೇರಿ ೨ ತೊಲ ಕುಟ್ಟಿ ೫೨ ತೊಲ ನೀರಿನಲ್ಲಿ ಹಾಕಿ ಕಷಾಯವನ್ನು ೩ ತೊಲಕ್ಕೆ ಇಳಿಸಿಕೊಂಡು ಶೋಧಿಸಿ ತಣ್ಣಗಾದ ಮೇಲೆ ಜೇನುತುಪ್ಪ ವನ್ನು ಕೂಡಿಸಿ ಕುಡಿಯುವುದರಿಂದ ಅಗ್ನಿಯು ಪ್ರಜ್ವಲವಾಗಿ ವಾಂತಿ, ನವೆ, ಗಂದೆಗಳು, ಕುರಗಳು, ಮೈಯ ಉರಿ ಇವೆಲ್ಲವೂ ಶಾಂತವಾಗುವುವು.

೭. ಕಹಿಪಡವಲದ ಎಲೆ, ಅಮೃತಬಳ್ಳಿ, ಬೇವಿನ ಎಲೆ, ಆಡುಸೋಗೆಸೊಪ್ಪು, ತುಂಠಿ ಇವುಗಳ ಕಷಾಯವನ್ನು ಕುಡಿಯುವು ದರಿಂದ, ಹುಳಿತೇಗು, ಶರೀರದ ಮೇಲೆ ಎದ್ದಿರುವ ಗಂದೆಗಳು, ನವೆ ಮುಂತಾದುವುಗಳು ಗುಣವಾಗುವುವು.

೮. ಕಹಿಪಡವಲದ ಎಲೆಗಳ ರಸವನ್ನು ಕೂದಲು ಉದರಿ ರುವ ಸ್ಥಳಕ್ಕೆ ಹಚ್ಚಿದರೆ ಬಹುಬೇಗನೆ ಕೂದಲು ಹುಟ್ಟುತ್ತವೆ, "ಇಂದ್ರ ಲುಪ್ತ ಅಥವಾ ಬಾಲಚರ" ಎಂಬ ರೋಗವು ಬಂದರೆ ಕೂದಲು ಉದುರಿ ಹೋಗುತ್ತವೆ. ಈ ರೋಗದ ಪ್ರಭಾವವು ಪ್ರಾಯಃ ಮೀಸೆಯ

ಮತ್ತು ಗಡ್ಡದ ಕೂದಲುಗಳ ಮೇಲೆಯೇ ಹೆಚ್ಚಾಗಿ ಬೀಳುತ್ತದೆ. ಮತ್ತು ಆ ಸ್ಥಳಗಳ ಕೂದಲು ಉದುರಿ ಹೋಗುತ್ತವೆ. ಈ ರೋಗಕ್ಕೆ ಕಹಿಪಡವಲದ ರಸವು ಬಹಳ ಗುಣಕಾರಿಯಾಗಿದೆ. ಈ ಪ್ರಯೋಗವು ಮೂರು ದಿನಗಳಲ್ಲಿಯೇ ಗುಣವನ್ನು ತೋರಿಸುವುದೆಂದು ಶಾರ್ಙಧರ ಸಂಹಿತೆಯಲ್ಲಿ ಬರೆಯಲ್ಪಟ್ಟಿದೆ.

---

**ಬದನೆಕಾಯಿ** :—ಉಷ್ಣಗುಣವುಳ್ಳುದು, ವಾತ-ಕಫ - ಜ್ವರಗಳನ್ನು ಶಾಂತಗೊಳಿಸುವುದು, ಜಠರಾಗ್ನಿಯನ್ನು ಹೆಚ್ಚಿಸುವುದು, ಪಿತ್ತವನ್ನು ಸ್ವಲ್ಪ ಮಟ್ಟಿಗೆ ಹೆಚ್ಚಿಸುವುದು, ಹೃದಯಕ್ಕೆ ಹಿತಕರವಾದುದು ಬದನೆ ಕಾಯಿಯಲ್ಲಿ ಅನೇಕ ವಿಧಗಳಿವೆ. ಗುಣದಲ್ಲಿ ಎಲ್ಲವೂ ಒಂದೇ ವಿಧವಾಗಿವೆ. ವಾತ ಮತ್ತು ಶ್ಲೇಷ್ಮದ ತೊಂದರೆಗಳಿರತಕ್ಕವರಿಗೆ ಬದನೆಕಾಯಿಯು ಲಾಭದಾಯಕವಾಗಿದೆ. ಇದರಲ್ಲಿ ಅತ್ಯುಷ್ಣತೆಯಿರುವುದರಿಂದ ಮೇಹವ್ಯಾಧಿಯವರಿಗೆ ಹಿತಕರವಲ್ಲ. ಈ ಕಾಯಿಯಲ್ಲಿ ಕ್ಷಾರವು ಹೆಚ್ಚಾಗಿದೆ. ಸಣ್ಣ ಬದನೆಕಾಯಿಯು-ವಿಶೇಷವಾಗಿ ಶ್ಲೇಷ್ಮ ಮತ್ತು ಪಿತ್ತವನ್ನು ಶಮನಗೊಳಿಸುವುದು. ದೊಡ್ಡ ಬದನೆಯಕಾಯಿಯು—ವಿಶೇಷವಾಗಿ ಶ್ಲೇಷ್ಮ ಮತ್ತು ಪಿತ್ತವನ್ನು ಹೆಚ್ಚಿಸುವುದು. ಮತ್ತು ಹಗುರಾದುದು. ಎಳೆಯ ಬದನೆಕಾಯಿಯು ವಾತ, ಪಿತ್ತ, ಶ್ಲೇಷ್ಮಗಳನ್ನು ಶಾಂತಗೊಳಿಸುತ್ತದೆ. ಮತ್ತು ರಕ್ತ, ವೀರ್ಯಗಳ ವೃದ್ಧಿಯನ್ನೂ, ಅಗ್ನಿವೃದ್ಧಿಯನ್ನೂ ಮಾಡುತ್ತದೆ. ಕಣ್ಣಿನ ರೋಗಗಳಿಗೆ ಹಿತಕರವಾಗಿದೆ. ಹೆಚ್ಚಾಗಿ ತಿನ್ನುವುದರಿಂದ ಕ್ರಿಮಿರೋಗವು ತಲೆದೋರುತ್ತದೆ. ಈ ಕಾಯಿಯನ್ನು ಕೆಲವು ವೈದ್ಯ ಗ್ರಂಥಗಳು "ಸರ್ವಶಾಕೋತ್ತಮಂ" ಎಂದು ಹೇಳುತ್ತವೆ. ಇದರಲ್ಲಿ ಗುಂಡಾಗಿ ಮತ್ತು ಗಿಡ್ಡಾಗಿರುವ ಬಿಳಿಯದು ಕರಿಯ ಬದನೆಕಾಯಿಗಿಂತ ಗುಣದಲ್ಲಿ ಕಡಿಮೆಯಾಗಿದ್ದರೂ ಮೂಲವ್ಯಾಧಿಯವರಿಗೆ ಮಾತ್ರ ವಿಶೇಷ ಗುಣಕಾರಿಯಾಗಿದೆ. ಬದನೆಯಕಾಯಿಗಳಲ್ಲಿ ಉದ್ದವಾದ, ಕರಿಯಬಣ್ಣದ, ಎಳೆಯ ಕಾಯಿಯೇ ಸರ್ವೋತ್ತಮವಾಗಿರುತ್ತದೆ.

೧. ಎಳೆಯ ಬದನೆಯ ಕಾಯಿಯನ್ನು ಕತ್ತರಿಸಿ ಸಕ್ಕರೆಯೊಡನೆ ತಿಂದು, ಮೇಲೆ ಸೌಂಪಿನ ಗಿಡದ ಬೇರು ಅಥವಾ ಸೌಂಪುಕಾಳು

ಗಳನ್ನು ನೀರಿನೊಡನೆ ಅರೆದು ಶೋಧಿಸಿ ಕುಡಿಯುವುದರಿಂದ ಶರೀರ ದಲ್ಲಿ ಯಾವ ಭಾಗಕ್ಕಾದರೂ ಪೆಟ್ಟುಬಿದ್ದು ನೋವುಂಟಾಗಿದ್ದರೆ ಆ ನೋವು ಕಡಿಮೆಯಾಗುತ್ತದೆ.

೨. ಬದನೆಯ ಗಿಡದ ಬೇರನ್ನು ತಂದು ನೀರಿನಲ್ಲಿ ತೇಯ್ದು ಕಣ್ಣುಗಳಿಗೆ ಹಚ್ಚುವುದರಿಂದ ಪರೆಯು ಕತ್ತರಿಸಿ ಹೋಗುತ್ತದೆ.

೩. ಬದನೆಯ ಗಿಡದ ಬೇರು, ಉತ್ತರಾಣಿ ಗಿಡದ ಬೇರು, ಈ ಎರಡು ಬೇರುಗಳನ್ನು ಸಮವಾಗಿ ತಂದು ಕುಟ್ಟಿ ನುಗ್ಗೆಸೊಪ್ಪಿನ ರಸ ದೊಡನೆ ನುಣ್ಣಗೆ ಅರೆದು ಗುಳಿಗೆಗಳನ್ನು ಕಟ್ಟಿ ನೆರಳಿನಲ್ಲಿ ಒಣಗಿಸಿ ಇಟ್ಟುಕೊಳ್ಳಬೇಕು. ಸಮಯವೊದಗಿದಾಗ ಶುದ್ಧವಾದ ಜೇನು ತುಪ್ಪದಲ್ಲಿ ತೇಯ್ದು ಕಣ್ಣುಗಳಿಗೆ ಹಚ್ಚುತ್ತಿರಬೇಕು. ಇದರಿಂದ ಪರೆಯು ಹರಿದು ಕಣ್ಣುಗಳು ಸ್ವಚ್ಛವಾಗುತ್ತವೆ.

೪. ಬದನೆಯ ಕಾಯಿಗಳನ್ನು ಒಣಗಿಸಿ ಕುಟ್ಟಿ, ಆ ಪುಡಿ ಯನ್ನು ಕೆಂಡದಮೇಲೆ ಹಾಕಿ, ಆ ಹೊಗೆಯನ್ನು ಕಿವಿಗಳಿಗೆ ಸೇರಿದರೆ ಕಿವಿಯಲ್ಲಿ ಸೇರಿರುವ ಹುಳುಗಳು ಸಾಯುತ್ತವೆ. ಯಾವಾಗಲೂ ಕಿವಿಯು ಸೋರುತ್ತಲೇ ಇದ್ದರೆ ಇದರಿಂದ ಬಹಳ ಪ್ರಯೋಜನ ವುಂಟಾಗುತ್ತದೆ

೫. ಬದನೆಯ ಗಿಡದ ಬೇರನ್ನು ತಂದು ಕುಟ್ಟಿ ಉತ್ತಮವಾದ ಪನ್ನೀರಿನಲ್ಲಿ ಅಥವಾ ನೀರಿನಲ್ಲಿ ಅರೆದು ಗುಳಿಗೆಗಳನ್ನು ಮಾಡಿ ನೆರಳಿ ನಲ್ಲಿ ಒಣಗಿಸಿ ಇಟ್ಟುಕೊಳ್ಳಬೇಕು. ಈ ಗುಳಿಗೆಯನ್ನು ಪನ್ನೀರು ಅಥವಾ ನೀರಿನಲ್ಲಿ ತೇಯ್ದು ಕಣ್ಣುಗಳಿಗೆ ಹಚ್ಚುತ್ತಿರುವುದರಿಂದ ಪರೆಯು ಕತ್ತರಿಸುತ್ತದೆ.

೬. ಬದನೆಯ ಕಾಯಿಗಳನ್ನು ಸಣ್ಣಸಣ್ಣ ಚೂರುಗಳನ್ನಾಗಿ ಕತ್ತರಿಸಿ ನೀರಿನಲ್ಲಿ ಹಾಕಿ ಚೆನ್ನಾಗಿ ಕಿವಿಚಿ ಆ ನೀರನ್ನು ಕುಡಿದರೆ ದತ್ತೂರಿಯ ವಿಷವು ಇಳಿದು ಹೋಗುತ್ತದೆ ಅಥವಾ ಬದನೆಯ ಬೀಜ ಗಳನ್ನು ಅರೆದು ರಸವನ್ನು ಕುಡಿದರೂ ದತ್ತೂರಿಯ ವಿಷವು ಇಳಿ ಯುತ್ತದೆ.

೭. ಬದನೆಯ ಕಾಯಿಯನ್ನು ಕತ್ತರಿಸಿ ಆ ಚೂರುಗಳನ್ನು ಮಣ್ಣಿನ ಪಾತ್ರೆಯಲ್ಲಿ ಹಾಕಿ ಹುರಿದು ಅದರ ಮೇಲೆ ಮೊಸರನ್ನು ಹಾಕಿ ನಾರು ಹುಣ್ಣಿನ ಮೇಲೆ ಕಟ್ಟಿದರೆ ದಾರವು ಹೊರಗೆ ಬಿದ್ದು ಹೋಗುತ್ತದೆ.

೮. ಬದನೆಯ ಕಾಯಿ ಮತ್ತು ಗಸಗಸೆ ಇವೆರಡನ್ನೂ ಸ್ವಲ್ಪ ಜಜ್ಜಿ ನೀರಿನಲ್ಲಿ ಹಾಕಿ ಕುದಿಸಬೇಕು. ಆ ನೀರಿನಲ್ಲಿ ಕೈಗಳನ್ನು ತೊಳೆದರೆ ಶೀತದಿಂದ ಕೈಗಳು ಬೆವರುತ್ತಿರುವುದು ನಿಲ್ಲುತ್ತದೆ.

೯. ಬದನೆಯ ಗಿಡದಲ್ಲಿರುವ ಬಹಳ ಚಿಕ್ಕ ಚಿಕ್ಕ ಎಳೆಯ ಕಾಯಿಗಳನ್ನು ತಂದು ನೀರಿನೊಡನೆ ಅರೆದು ಶೋಧಿಸಿ ಕುಡಿಯುವುದರಿಂದ ಸ್ತ್ರೀಯರ ಮಾಸಿಕ ರಜಸ್ಸಿನ ಅತ್ಯಧಿಕ ಸ್ರಾವವು ನಿಲ್ಲುತ್ತದೆ. ಮತ್ತು ಕ್ರಮಗೊಳ್ಳುತ್ತದೆ.

---

ಕುಂಬಳಕಾಯಿ :—ಇದರಲ್ಲಿ ಎರಡು ಜಾತಿಗಳಿವೆ. ಕೆಂಪು ಬಣ್ಣದ ಕಾಯಿಯನ್ನು ಹುಳಿ, ಪಲ್ಯಗಳಿಗೆ ಉಪಯೋಗಿಸುತ್ತಾರೆ. ಬಿಳಿಯ ಬಣ್ಣದ ಕಾಯಿಯು ಬೂದಿಗುಂಬಳವೆಂದು ಪ್ರಸಿದ್ಧವಾಗಿದೆ. ಇದು ಬಹಳ ಗುಣಕಾರಿಯಾಗಿದೆ. ಇದನ್ನು ಔಷಧಿ ರೂಪವಾಗಿ ಉಪಯೋಗಿಸುವುದೇ ಹೆಚ್ಚಾಗಿದೆ. ಇದನ್ನು ತರಕಾರಿಯ ರೂಪವಾಗಿ ಉಪಯೋಗಿಸುವುದು ಬಹಳ ಕಡಿಮೆ.

ಬಲಿತು ಹಣ್ಣಾಗಿರುವ ಕುಂಬಳವೇ ರುಚಿಕರ ಮತ್ತು ದೇಹಪುಷ್ಟಿ-ಬಲ-ವೀರ್ಯಗಳನ್ನು ಹೆಚ್ಚಿಸುವುದು, ಮಲಮೂತ್ರಗಳನ್ನು ಸಡಲಿಸುವುದು, ಪಿತ್ತವಿಕಾರ-ಮೂಲವ್ಯಾಧಿ-ದಾಹ-ಸಂತಾಪ-ಹೊಟ್ಟೆಯುಬ್ಬರ-ರಕ್ತವಿಕಾರಗಳನ್ನು ಶಾಂತಮಾಡುತ್ತದೆ. ಎಳಸಾದ ಕಾಯಿಯು ಗುಣಕಾರಿಯಲ್ಲ ಎಳೆಯ ಕಾಯಿಯನ್ನು ತಿನ್ನುವುದರಿಂದ ರಕ್ತವಿಕಾರ ಮತ್ತು ಪಿತ್ತವಿಕಾರವುಂಟಾಗುವುದಲ್ಲದೆ ಅಗ್ನಿಯು ಮಂದವಾಗುತ್ತದೆ. ದುರ್ಬಲರಾದವರಿಗೂ, ರೋಗಿಗಳಿಗೂ ಎಳೆಯ ಕುಂಬಳಕಾಯಿಯು ಬಹಳ ಕೆಡಕನ್ನುಂಟು

ನೂಡುತ್ತದೆ. ಯಾವಾಗಲೂ ಇದನ್ನು ಬಲಿತು ಕೆಂಪೇರಿದ ಮೇಲೆಯೇ ತಿನ್ನುವುದುತ್ತಮು. ಈ ಕುಂಬಳಳವು ಅತ್ಯಂತ ರುಚಿಕರವೂ, ಗುಣಕರವೂ, ಆರೋಗ್ಯವರ್ಧಕವೂ ಆಗಿರುತ್ತದೆ. ಹಳ್ಳಿಗಳಲ್ಲಿ ಇದನ್ನು ಸುಮಾರು ಒಂದೊಂದು ವರ್ಷದ ವರೆಗೂ ಇಡುವ ಪದ್ಧತಿಯುಂಟು. ಇತರ ತರ್ಕಾರಿಗಳಂತೆ ಇದು ಬೇಗ ಕೆಡುವುದಿಲ್ಲ. ಇದರ ಬೀಜಗಳು ಅತ್ಯಂತ ರುಚಿಕರವೂ ಪುಷ್ಟಿಕರವೂ ಆಗಿರುವುವಲ್ಲದೆ ಹೃದಯ ಮುತ್ತು ಮೆದಳಿಗೆ ವಿಶೇಷ ಬಲವನ್ನು ಕೊಡತಕ್ಕುವಾಗಿವೆ. ಇದರ ಮರ್ಮವನ್ನರಿತಿದ್ದ ನಮ್ಮ ಹಿರಿಯರುಗಳು ಮನೆಗೆ ಕುಂಬಳಕಾಯಿಯನ್ನು ತಂದರೆ ಬೀಜಗಳನ್ನು ಬಿಸಾಡುತ್ತಿರಲಿಲ್ಲ. ಅವುಗಳನ್ನು ಒಣಗಿಸಿ ತಿನ್ನುತ್ತಿದ್ದರು ಮುತ್ತು ಮಕ್ಕಳಿಗೆ ತಿನ್ನಿಸುತ್ತಿದ್ದರು. ಈಗಿನ ಕಾಲದಲ್ಲಿ ಆ ಬೀಜಗಳನ್ನು ಕೇಳತಕ್ಕವರೇ ಇಲ್ಲ. ಹೃದಯದ ಮುತ್ತು ಮೆದಳಿನ ದುರ್ಬಲತೆಯುಳ್ಳವರು ಕುಂಬಳದ ಬೀಜಗಳನ್ನು ಬಿಡದೆ ಕೆಲವು ದಿನಗಳವರೆಗೆ ಹಾಗೆಯೇ ಆಗಲಿ ಅಥವಾ ಹಾಲಿನೊಡನೆ ಅರೆದಾಗಲಿ ಸೇವಿಸುತ್ತಿದ್ದರೆ ವಿಶೇಷ ಪ್ರಯೋಜನವುಂಟಾಗುತ್ತದೆ. ಇದು ನಮ್ಮ ಮನೆಯ ಟಾಣಿಕ್ಕು! ಇಂತಹ ಸುಲಭಕರವಾದ ಪುಷ್ಟಿಕರ ವಸ್ತುವನ್ನು ಚೆಲ್ಲಿ ಬಹು ಬೆಲೆಯ ಅನೇಕ ಟಾಣಿಕ್ಕುಗಳಿಗೆ ಹಣವನ್ನು ಚೆಲ್ಲುವುದು ನಮ್ಮ ದೇಶದಲ್ಲಿ ಈಗ ಬಲವಾಗುತ್ತಿದೆ! ಮೆದಳಿಗೆ ವಿಶೇಷ ಪರಿಶ್ರಮವನ್ನು ಕೊಡತಕ್ಕವರು ಕುಂಬಳದ ಬೀಜವನ್ನು ಅವಶ್ಯವಾಗಿ ಸೇವಿಸಬೇಕು.

೧. ಕುಂಬಳ ಬೀಜಗಳ ಚೂರ್ಣ ೪೮ ಗುಂಜಿಗಳ ತೂಕ ಮುತ್ತು ಹಸನಾದ ಕೋಷ್ಠದ ಚೂರ್ಣ ೧೨ ಗುಂಜಿಗಳ ತೂಕ ಇವೆರಡನ್ನೂ ಅರ್ಧ ತೊಲ ಜೇನುತುಪ್ಪದೊಡನೆ ಕೂಡಿಸಿ ಸೇವಿಸುವುದರಿಂದ ಬುದ್ಧಿಭ್ರಮಣೆ (ಹುಚ್ಚು) ಅವಶ್ಯವಾಗಿ ಗುಣವಾಗುತ್ತದೆ. ಪರೀಕ್ಷಿಸಲ್ಪಟ್ಟಿದೆ.

೨. ಸಿಪ್ಪೆಯನ್ನು ತೆಗೆದ ಕುಂಬಳಬೀಜ ೨ ತೊಲವನ್ನು ರಾತ್ರಿಯಲ್ಲಿ ಕಲ್ಲಿನ ಅಥವಾ ಮಣ್ಣಿನ ಪಾತ್ರೆಯಲ್ಲಿ ೫ ತೊಲ ನೀರಿನಲ್ಲಿ ನೆನೆಹಾಕಿದ್ದು ಪ್ರಾತಃಕಾಲದಲ್ಲಿ ಅದನ್ನು ಕಲ್ಲಿನ ಮೇಲೆ

ಷುಣ್ಣಿಗೆ ಅರೆದು ಶೋಧಿಸಿಕೊಂಡು ಅರ್ಧ ತೊಲ ಜೇನುತುಪ್ಪ ವನ್ನು ಕೂಡಿಸಿ ಕುಡಿಯಬೇಕು. ೧೫ ದಿನಗಳ ವರೆಗೆ ಇದನ್ನು ಬಿಡದೆ ಮಾಡಿದರೆ ಬುದ್ಧಿಭ್ರಮಣೆ ಅಥವಾ ಹುಚ್ಚು (ಉನ್ಮಾದ) ಖಂಡಿತ ಗುಣವಾಗುತ್ತದೆ. ಪರೀಕ್ಷಿಸಲ್ಪಟ್ಟಿದೆ.

೩. ಕುಂಬಳದ ಬೀಜ ‖ ತೊಲ, ಬಾದಾಮಿಯ ಬೀಜ ‖ ತೊಲ ಕೇಸರಿ ೧ ಗುಂಜಿ, ಇವುಗಳನ್ನು ೧೦ ತೊಲ ನೀರಿನೊಡನೆ ಅರೆದು ೨ ತೊಲ ಸಕ್ಕರೆ ಮತ್ತು ೩ ತೊಲ ತುಪ್ಪವನ್ನು ಹಾಕಿ ಕಾಯಿಸಬೇಕು. ಇದನ್ನು ಸುಡುತ್ತಿರುವಾಗಲೇ ಕುಡಿದರೆ ಮೆದಳಿನ ದುರ್ಬಲತೆಯು ನಾಶವಾಗುತ್ತದೆ.

೪. ಕುಂಬಳದ ಬೀಜ ‖ ತೊಲ, ಸೂರಣದ ಗಡ್ಡೆ ‖ ತೊಲ ಬಿಳಿಯ ಗುರುಗಂಜಿ ‖ ತೊಲ, ಈ ಮೂರನ್ನು ಕುಟ್ಟಿ ನೀರಿನೊಡನೆ ಅರೆದು ಬಟ್ಟೆಗೆ ಲೇಪಿಸಬೇಕು, ಆ ಬಟ್ಟೆಯನ್ನು ಬತ್ತಿಯಂತೆ ಸುತ್ತಿ ಅದನ್ನು ಮೂಲವ್ಯಾಧಿಯವರ ಆಸನದೊಳಕ್ಕೆ ೨ ಅಂಗುಲಗಳವರೆಗೆ ಸೇರಿಸುವುದರಿಂದ ಮೊಳಕೆಗಳು ನಾಶವಾಗುತ್ತವೆ. ಪ್ರಯೋಜನಾಭಿ ಲಾಷಿಗಳು ಈ ಪ್ರಯೋಗವನ್ನು ೩ ದಿನಗಳ ವರೆಗೆ ತಪ್ಪದಂತೆ ಮಾಡಬೇಕು. ಬಹುದಿನಗಳ ರೋಗವುಳ್ಳವರು ಒಂದು ವಾರದ ವರೆಗಾದರೂ ಮಾಡಬೇಕು.

---

**ಬೂದಿಗುಂಬಳಕಾಯಿ**:—ತಂಪುಗುಣವುಳ್ಳುದು, ಮೂತ್ರದ ಕಟ್ಟು ಉರಿಮೂತ್ರಗಳನ್ನು ಶಾಂತಗೊಳಿಸುವುದು, ಮೂತ್ರಾಶಯದ ವಿಕಾರವನ್ನು ನಿವಾರಿಸುವುದು, ಪಾಂಡುರೋಗ-ಜ್ವರ-ಕ್ಷಯ-ರಕ್ತದ ವಾಂತಿ-ರಕ್ತದ ಭೇದಿ ಇವುಗಳಿಗೆ ಶಮನಕಾರಿಯಾದುದು, ಶುದ್ಧ ರಕ್ತವನ್ನು ಹುಟ್ಟಿಸುವುದು, ಯಕೃತ್ತು (ಲೀವರ್) ಮತ್ತು ಹೊಟ್ಟೆ ಯಲ್ಲಿ ಸೇರಿರುವ ಕಾವನ್ನು ಶಾಂತಿಗೊಳಿಸುವುದು, ಮೇಹವ್ಯಾಧಿ ಯನ್ನು ನಿವಾರಿಸಿ ದೇಹಪುಷ್ಟಿಯನ್ನು ಕೊಟ್ಟು ವೀರ್ಯ ಮತ್ತು ಬಲ ವನ್ನು ಸ್ಥಿರಗೊಳಿಸುತ್ತದೆ. ಮಂದಾಗ್ನಿ, ಅಜೀರ್ಣ, ಸಂಗ್ರಹಣಿ ಮೂತ್ರದ ಕಲ್ಲು, ಕ್ರಿಮಿರೋಗ ಮುಂತಾದುವುಗಳ ತೊಂದರೆಯನ್ನು

ದೂರಮಾಡುತ್ತದೆ. ಕ್ಷಯರೋಗಿಗಳಿಗೆ ಇದನ್ನು ಆಹಾರ ರೂಪವಾಗಿ ಕೊಡುವುದರಿಂದ ವಿಶೇಷ ಪ್ರಯೋಜನವುಂಟಾಗುತ್ತದೆ.

೧. ಬೂದಿಗುಂಬಳದ ೩ ತೊಲ ರಸಕ್ಕೆ ಕಾಲುತೊಲ ಯವಕ್ಷಾರ ಮತ್ತು ೧ ತೊಲ ಸಕ್ಕರೆಯನ್ನು ಕೂಡಿಸಿ ಕುಡಿಯುವುದರಿಂದ ತಡೆಯುತ್ತಿರುವ ಮೂತ್ರವು ಖಂಡಿತವಾಗಿ ಕ್ರಮಗೊಳ್ಳುತ್ತದೆ.

ಪರೀಕ್ಷಿಸಲ್ಪಟ್ಟಿದೆ.

೨. ಈ ಕುಂಬಳದ ೩ತೊಲ ರಸದಲ್ಲಿ ೪ ಗುಂಜಿ ಯವಕ್ಷಾರ ಮತ್ತು ೨ ಗುಂಜಿ ಹುರಿದಹಿಂಗು ಇವುಗಳನ್ನು ಅರೆದು ಕುಡಿಯುವುದರಿಂದ ಕಿಬ್ಬೊಟ್ಟೆಯ ತೂಲ, ಮೂತ್ರನಾಳದ ತೂಲ, ಸಕ್ಕರೆ ಹೋಗುವುದು (ಮಧುಮೇಹ) ಮೂತ್ರಕಲ್ಲು, ಇವುಗಳು ಗುಣವಾಗುವುವು.

೩. ಉತ್ತಮವಾದ ಬೂದಿಗುಂಬಳಕಾಯಿಯ ರಸ ೫ ಸೇರು, ಹಸುವಿನ ಹಾಲು ೫ ಸೇರು, ಕುಟ್ಟಿ ಬಟ್ಟೆಯಿಂದ ಶೋಧಿಸಿದ ನೆಲ್ಲಿಚೆಟ್ಟಿನ ಚೂರ್ಣ ೩೨ ತೊಲ, ಇವುಗಳನ್ನೆಲ್ಲಾ ಕೂಡಿಸಿ ಮಂದಾಗ್ನಿಯಿಂದ ಮೆಲ್ಲನೆ ಕಾಯಿಸುತ್ತಾ ಹೊತ್ತದಂತೆ ಪದೇಪದೇ ತಿರುಗಿಸುತ್ತಾ ಗಟ್ಟಿಯಾಗುವವರೆಗೂ ಕುದಿಸಿರಿ, ಗಟ್ಟಿಯಾಗುವಾಗ ೩೨ ತೊಲ ಬೂರಾಸಕ್ಕರೆಯನ್ನು ಹಾಕಿ ಕೂಡಿಸಿ ಕೆಳಗಿಳಿಸಿಬಿಡಿ. ಈ "ಖಂಡಕೂಷ್ಮಾಂಡ ಲೇಹ್ಯ" ವನ್ನು ನಿತ್ಯದಲ್ಲಿ ಎರಡೆರಡು ತೊಲದಂತೆ ಸೇವಿಸುವುದರಿಂದ ಬಾಯಿ, ಮೂಗು, ಆಸನ ಮುಂತಾದ ದ್ವಾರಗಳಿಂದ ರಕ್ತವು ಸೋರುತ್ತಿರುವುದು, ಅಮ್ಲಪಿತ್ತ, (ಹುಳಿತೇಗು, ಎದೆಯಲ್ಲಿ ಒತ್ತುವುದು, ಹಳದಿಯನೀರು ವಾಂತಿಯಾಗುವುದು, ಗಂಟಲು ಎದೆಗಳ ಉರಿ ಮುಂತಾದುವು) ಬಾಯಾರಿಕೆ, ಕಾಮಾಲೆ, ಇವುಗಳು ನಾತವಾಗುತ್ತವೆ.

೪. ಉತ್ತಮವಾದ ದೊಡ್ಡ ಬೂದಿಗುಂಬಳಕಾಯಿಯನ್ನು ತಂದು ಮೇಲಿನ ಸಿಪ್ಪೆಯನ್ನು ತೆಗೆದು ಎರಡು ಹೋಳು ಮಾಡಿ ಬೀಜ ಮತ್ತು ತಿರುಳನ್ನು ತೆಗೆದುಹಾಕಿ ಬಿಡಿ, ಅನಂತರ ಚೂರುಮಾಡಿ ೧೦ ಪೌಂಡು ಚೂರನ್ನು ತೆಗೆದುಕೊಳ್ಳಿ, ಅದನ್ನು ೧೦ ಸೇರು ನೀರಿನಲ್ಲಿ ಬೇಯಿಸಿರಿ, ಅರ್ಧ ನೀರು ನಿಂತಮೇಲೆ ಇಳಿಸಿರಿ, ತಣ್ಣಗಾದ ಮೇಲೆ

ಕುಂಬಳದ ಚೂರುಗಳನ್ನು ತೆಗೆದುಕೊಂಡು ಒಂದು ದಪ್ಪ ಬಟ್ಟೆಯಲ್ಲಿ ಹಾಕಿ ಒತ್ತಿ ಒತ್ತಿ ರಸವನ್ನು ನೊದಲಿನ ಪಾತ್ರೆಗೇ ಹಿಂಡಿಕೊಳ್ಳಿ, ಈ ನೀರನ್ನು ಒಂದು ಕಡೆ ಇಟ್ಟುಬಿಡಿ, ಹಿಂಡಿರುವ ಕುಂಬಳದ ಚೂರುಗಳನ್ನು ಸ್ವಲ್ಪಹೊತ್ತು ಬಿಸಿಲಿನಲ್ಲಿ ಆರಿಸಿರಿ, ಅನಂತರ ಒಂದು ಪಾತ್ರೆಯಲ್ಲಿ ೬೪ ತೊಲ ತುಪ್ಪವನ್ನು ಹಾಕಿ ಒಲೆಯಮೇಲಿಟ್ಟು ಕಾಯಿಸಿರಿ, ತುಪ್ಪವು ಕಾಯ್ದ ಮೇಲೆ ಆ ಚೂರುಗಳನ್ನು ತುಪ್ಪದಲ್ಲಿ ಹಾಕಿ ಕೆಂಪಾಗುವವರೆಗೆ ಹುರಿಯಿರಿ, ಅನಂತರ ಬೇರೆ ಇಟ್ಟಿರುವ ನೀರನ್ನೂ ಮತ್ತು ೧೦ ಪೌಂಡು ಕಲ್ಲುಸಕ್ಕರೆಯನ್ನೂ ಹಾಕಿ ಮಂದಾಗ್ನಿಯಿಂದ ಕಾಯಿಸಿರಿ, ಪಾಕವು ಬಂದಮೇಲೆ ಕೆಳಗಿಳಿಸಿಬಿಡಿ; ಬಿಸಿಯಾಗಿರುವಾಗಲೇ ಈ ಕೆಳಗೆ ಕಾಣಿಸಿರುವ ಚೂರ್ಣವನ್ನು ಮೊದಲೇ ಸಿದ್ಧಮಾಡಿಟ್ಟುಕೊಂಡಿದ್ದು ಹಾಕಬೇಕು. ಹಿಪ್ಪಲಿ ೮ ತೊಲ, ಶುಂಠಿ ೮ ತೊಲ, ಜೀರಿಗೆ ೮ ತೊಲ, ಧನಿಯಾ ೨ ತೊಲ, ತೇಜಪತ್ರೆ ೨ ತೊಲ ಏಲಕ್ಕಿ ೨ ತೊಲ, ಮೆಣಸು ೨ ತೊಲ, ದಾಲಚೀನಿ ೨ ತೊಲ, ಇವುಗಳನ್ನು ಕೂಡಿಸಿ ಪೂರ್ತಿ ತಣ್ಣಗಾದನಂತರ ೩೨ ತೊಲ ಜೇನುತುಪ್ಪವನ್ನು ಕೂಡಿಸಿ ಬೇರೆ ಪಾತ್ರೆ ಅಥವಾ ಜಾಡಿಯಲ್ಲಿ ಇಟ್ಟುಕೊಳ್ಳಿ. ನಿತ್ಯದಲ್ಲಿ ೧ ರಿಂದ ೨ ತೊಲಗಳ ವರೆಗೆ ಅವರವರ ಶಕ್ತಿ ಮತ್ತು ಅಗ್ನಿಯ ಬಲವನ್ನು ನೋಡಿಕೊಂಡು ಮೇಕೆಯ ಹಾಲಿನೊಡನೆ ಸೇವಿಸಬೇಕು. ಇದರ ಸೇವನೆಯಿಂದ ರಕ್ತಪಿತ್ತ, ಪಿತ್ತಜ್ವರ, ಬಾಯಾರಿಕೆ, ಪ್ರದರ, ಒಣಗಿಕೊಂಡಿರುವುದು, ವಾಂತಿ, ಕೆಮ್ಮಲು, ಉಬ್ಬಸ, ಎದೆನೋವು, ಧ್ವನಿಕುಗ್ಗುವುದು, ಕ್ಷಯ, ಎದೆಯುಗಾಯ, ಲೀವರ್ರಿನ ಬೆಳವಣಿಗೆ ಇವೆಲ್ಲವೂ ನಾಶವಾಗುತ್ತವೆ. ಮತ್ತು ಇದು ಬಲವರ್ಧಕವೂ ಪುಷ್ಟಿಕರವೂ ಆಗಿರುತ್ತದೆ ಎಷ್ಟೋ ಸಲ ಪರೀಕ್ಷಿಸಲ್ಪಟ್ಟಿದೆ.

೫. ಬೂದಿಗುಂಬಳದ ಬೇರಿನ ರಸ ೧ ತೊಲ ಅಥವಾ ಬೂದಿಗುಂಬಳದ ಬೇರಿನ ಚೂರ್ಣ ಅಥವಾ ಬೂದಿಗುಂಬಳದ ಎಲೆಯ ಚೂರ್ಣ, ಇವುಗಳಲ್ಲಿ ಯಾವುದನ್ನಾದರೂ ಬಿಸಿನೀರಿನೊಡನೆ ಸೇವಿಸುವುದರಿಂದ ದಮ್ಮು (ಗೂರಲು) ಕೆಮ್ಮುಗಳು ಬಹುಬೇಗನೆ ಹಿಮ್ಮುಖವಾಗುವುವು ಮತ್ತು ಕ್ರಮದಿಂದ ಗುಣವನ್ನೂ ಹೊಂದುವುವು.

ಪರೀಕ್ಷಿಸಲ್ಪಟ್ಟಿದೆ.

೬. ಬೂದಿಗುಂಬಳದ ಕಾಯಿಯ ಬೀಜ, ಸೌತೆಕಾಯಿಯ ಬೀಜ, ಇವೆರಡನ್ನೂ ನೀರಿನೊಡನೆ ಅರೆದು ಕಿಬ್ಬೊಟ್ಟೆಗೆ ಮಂದವಾಗಿ ಲೇಪಿಸುವುದರಿಂದ ಮೂತ್ರದ ತಡೆಯು ದೂರವಾಗಿ ಮೂತ್ರವಿಸರ್ಜನೆಯು ಅಯಾಸವಿಲ್ಲದೆ ಆಗುತ್ತದೆ.

೭. ಬೂದಿಗುಂಬಳದ ರಸಕ್ಕೆ ಯವಕ್ಷಾರ ಮತ್ತು ಬೆಲ್ಲವನ್ನು ಕೂಡಿಸಿ ಕುಡಿಯುವುದರಿಂದ ಮೂತ್ರದ ತಡೆ, ಮೂತ್ರದ ಕಲ್ಲು ಮತ್ತು ಸಕ್ಕರೆ ಹೋಗುವಿಕೆ ಮುಂತಾದುವುಗಳು ಗುಣವಾಗುತ್ತವೆ. ಪರೀಕ್ಷಿಸಲ್ಪಟ್ಟಿದೆ.

---

**ಸೋರೇಕಾಯಿ:**—ಇದರಲ್ಲಿ ಸಿಹಿ, ಕಹಿಯ ಭೇದದಿಂದ ಎರಡು ಜಾತಿಗಳಿವೆ ಮತ್ತು ಕೆಲವು ಗುಂಡಾಗಿಯೂ ಕೆಲವು ಉದ್ದವಾಗಿಯೂ ಬೆಳೆಯುತ್ತವೆ. ಸಿಹಿ ಕಾಯಿಯು ತಂಪು ಮತ್ತು ಮಧುರವಾಗಿರುತ್ತದೆ. ಗರ್ಭಿಣಿಯರ ಗರ್ಭವನ್ನು ಪೋಷಿಸುವುದು, ಬಲಕಾರಿ, ವೀರ್ಯವರ್ಧಕ, ಮಲಸ್ತಂಭಕ, ಪಿತ್ತನಾಶಕ, ವಾತಕಾರಕವಾಗಿರುತ್ತದೆ ಮತ್ತು ಹೃದಯಕ್ಕೆ ಲಾಭಕಾರಿಯಾಗಿರುತ್ತದೆ. ಇದು ವಾಯುವಿಕಾರ ಮತ್ತು ಶ್ಲೇಷ್ಮವಿಕಾರವುಳ್ಳವರಿಗೆ ಹಿತಕರವಲ್ಲ. ಇದರಲ್ಲಿ ಪಿತ್ತವನ್ನು ಶಾಂತಗೊಳಿಸತಕ್ಕ ಗುಣವು ಹೆಚ್ಚಾಗಿದೆ. ಇದರ ಬೀಜಗಳು ಮೇಹಶಾಂತಿಯನ್ನು ಮಾಡಿ ವೀರ್ಯವೃದ್ಧಿಯನ್ನು ಮತ್ತು ವೀರ್ಯಸ್ತಂಭನವನ್ನುಂಟುಮಾಡುವುವು.

೧. ಸೋರೆಯ ಕಾಯಿಯ ರಸದಲ್ಲಿ ಕೊತ್ತುಂಬರಿಯ ಬೀಜ, ಅತಿಮಧುರ, ಏಲಕ್ಕಿ, ಕಲ್ಲುಸಕ್ಕರೆ ಇವುಗಳನ್ನು ಅರೆದು ಪಾನಕವನ್ನು ಮಾಡಿ ಕುಡಿದರೆ ವಾಂತಿ ಮತ್ತು ತಲೆತಿರುಗುವಿಕೆ ಮುಂತಾದ ಪಿತ್ತವಿಕಾರಗಳು ಶಾಂತವಾಗುತ್ತವೆ.

೨. ಸೋರೆಯಬೀಜ, ಯವಕ್ಷಾರ, ಏಲಕ್ಕಿ, ಪಟಿಕ, ಇವುಗಳನ್ನು ಸಮವಾಗಿ ತಂದು ಕುಟ್ಟಿ ಚೂರ್ಣವನ್ನು ಮಾಡಿ ಶೋಧಿಸಿಕೊಂಡು ಜೇನುತುಪ್ಪದಲ್ಲಿ ಕೂಡಿಸಿ ಲೇಹ್ಯದಂತೆ ಮಾಡಿಟ್ಟು

ಕೊಳ್ಳಬೇಕು. ಇವರಲ್ಲಿ ಕಾಲು ಕಾಲು ತೊಲದಂತೆ ಪ್ರತಿದಿನದ ಪ್ರಾತಃಕಾಲದಲ್ಲಿಯೇ ಸೇವಿಸುವುದರಿಂದ ಮೂತ್ರಕಟ್ಟು ನಾಶವಾಗಿ ಮೂತ್ರವು ಅನಾಯಾಸದಿಂದ ಹೊರಡುವುದಲ್ಲದೆ ಮೂತ್ರದ್ವಾರದಿಂದ ಕೀವು, ರಕ್ತಗಳು ಸೋರುತ್ತಿದ್ದರೂ ನಿಂತು ಹೋಗುತ್ತದೆ.

೩. ಸೋರೆಯ ಕಾಯಿಯ ಒಣಗಿದ ಬೀಜ ೬ ತೊಲ, ನಸುಗುನ್ನಿಯ ಬೀಜ ೬ ತೊಲ, ಹುರಿದ ಉದ್ದಿನ ಹಿಟ್ಟು ೬ ತೊಲ ಲವಂಗ, ಏಲಕ್ಕಿ, ಜೀರಿಗೆ, ಶುಂಠಿ, ಹಿಪ್ಪಲಿ, ಮೆಣಸು, ಇವುಗಳು ಪ್ರತಿಯೊಂದು ಒಂದೊಂದು ತೊಲ, ಎಲ್ಲವನ್ನೂ ಕುಟ್ಟಿ ಬಟ್ಟೆಯಿಂದ ಶೋಧಿಸಿಕೊಂಡು ಸಮಭಾಗ ಸಕ್ಕರೆಯನ್ನು ಕೂಡಿಸಿ ಇಟ್ಟುಕೊಳ್ಳಬೇಕು. ಪ್ರಾತಃಕಾಲ ಸಾಯಂಕಾಲಗಳಲ್ಲಿ ಒಂದೊಂದು ತೊಲ ಚೂರ್ಣವನ್ನು ತುಪ್ಪದೊಡನೆ ಸೇವಿಸಬೇಕು. ಇದರಿಂದ ವೀರ್ಯ ವೃದ್ಧಿಯೂ ವೀರ್ಯಪುಷ್ಟಿಯೂ ಆಗುತ್ತದೆ ಮತ್ತು ಬಲ, ವರ್ಣಗಳು ಹೆಚ್ಚಾಗುತ್ತವೆ.

೪. ಸೋರೆಯ ಬೀಜದೊಳಗಿನ ಪೊಪ್ಪು ಆರಾಣೆ ತೂಕ, ಅಜವಾನ ಐದಾಣೆ ತೂಕ, ಭಂಗಿಸೊಪ್ಪಿನ ಬೀಜ ಎಂಟಾಣೆ ತೂಕ, ಹುರಿದ ಕಡಲೆ ಏಳಾಣೆ ತೂಕ, ಅಫೀಮು ಮೂರಾಣೆ ತೂಕ, ಕೇಸರಿ ನಾಲ್ಕು ಗುರುಗಂಜಿ ತೂಕ, ಏಲಕ್ಕಿಯ ಕಾಳು ಒಂದಾಣೆ ತೂಕ, ಗಸಗಸೆ ೩ ತೊಲ, ಇವುಗಳನ್ನೆಲ್ಲಾ ಕುಟ್ಟಿ ಬಟ್ಟೆಯಿಂದ ಶೋಧಿಸಿಕೊಳ್ಳಬೇಕು. ಗಸಗಸೆಯನ್ನು ಮಾತ್ರ ನೀರಿನಲ್ಲಿ ನೆನೆ ಹಾಕಿದ್ದು ಅರೆದು ಸ್ವಲ್ಪ ನೀರಿನಲ್ಲಿ ಕೂಡಿಸಿ ಶೋಧಿಸಿಕೊಳ್ಳಬೇಕು. ಈ ನೀರಿನಲ್ಲಿ ಮೇಲಿನ ಚೂರ್ಣವನ್ನು ಹಾಕಿ ಕಲ್ವತ್ತಿನಲ್ಲಿ ೩ ಗಂಟೆಗಳ ಕಾಲ ಅರೆದು ಸಣ್ಣ ಎಲಚಿ (ಬೋರೆ) ಹಣ್ಣಿನಷ್ಟು ಗುಳಿಗೆಗಳನ್ನು ಮಾಡಿ ನೆರಳಿನಲ್ಲಿ ಒಣಗಿಸಿ ಇಟ್ಟುಕೊಳ್ಳಬೇಕು. ಅಫೀಮನ್ನು ಹಾಗೆಯೇ ಇಟ್ಟಿದ್ದು ಎಲ್ಲವನ್ನೂ ಅರೆಯುವಾಗ ಹಾಕಿಕೊಂಡು ಅರೆಯಬೇಕು. ಈ ಗುಳಿಗೆಗಳು ಹಸಿಯಾಗಿರುವಾಗ ಅವುಗಳಿಗೆ ಬೆಳ್ಳಿಯ ಉತ್ತಮವಾದ ರೇಕನ್ನು ಸುತ್ತಿ ಅನಂತರ ಒಣಗಿಸಿಕೊಂಡರೆ ಔಷಧವು ವಿಶೇಷ ಗುಣಕಾರಿಯಾಗುತ್ತದೆ. ಈ ಗುಳಿಗೆಗಳನ್ನು ಒಂದೊಂದರಂತೆ ರಾತ್ರಿಯಲ್ಲಿ ಸ್ತ್ರೀ ಸಹವಾಸಕ್ಕಿಂತ ೧॥ ಗಂಟೆ ಮೊದಲು

ಸುಂಗಿ ೧ ಪಾವು ಹಾಲನ್ನು ಕುಡಿಯಬೇಕು ಇದರಿಂದ ಸಹವಾಸದಲ್ಲಿ ಬಹಳ ಆನಂದ ಉಂಟಾಗುವುದಲ್ಲದೆ ವೀರ್ಯದ ಸ್ತಂಭನೆಯು ಬಹಳ ಹೊತ್ತಿನವರೆಗೆ ಆಗುವುದು. ಈಗಿನ ಕಾಲದ ಆಹಾರ ವಿಹಾರಗಳಿಂದ ಮತ್ತು ನಾನಾವಿಧ ದುಷ್ಟ ಸಹವಾಸದಿಂದ ವೀರ್ಯವು ನೀರಿನಂತಾಗಿ ಶೀಘ್ರಪತನವೆಂಬ ದೋಷವು ಸೇಕಡಾ ೮೦ ಜನರಿಗೆ ಇರುತ್ತದೆ ಅದನ್ನು ಇತರರ ಮುಂದೆ ಹೇಳಲು ಸಂಕೋಚಪಟ್ಟು ತಮ್ಮಲ್ಲಿ ತಾನೇ ಮರುಗುತ್ತಾರೆ. ಇಂತಹ ಜನಗಳಿಗೆ ಸಂತಾನವಾದರೆ ದುರ್ಬಲ ಮತ್ತು ನಿತ್ಯರೋಗಿಯಾಗಿರುತ್ತದೆ. ಈ ದೋಷ ನಿವಾರಣೆಗಾಗಿ ಎಷ್ಟೋ ಹಣ ವನ್ನು ಹಾಳುಮಾಡಿಕೊಳ್ಳುತ್ತಾರೆ. ಆದರೂ ಫಲವಿಲ್ಲದೆ ಕಡೆಗೆ ನಿರಾಶ ರಾಗುತ್ತಾರೆ! ಇಂತಹ ಜನಗಳು ಈ ಗುಳಿಗೆಗಳನ್ನು ಮಾಡಿಸಿಕೊಂಡು ಅವಶ್ಯವಾಗಿ ಸೇವಿಸಿ ನಿಜವಾದ ಗಾರ್ಹಸ್ಥ್ಯ ಸುಖವನ್ನು ಹೊಂದ ಬಹುದು. ಶೀಘ್ರಪತನಕ್ಕೆ ಹುಣಸೆಯ ಹಣ್ಣಿನ ಉಪಯೋಗದಲ್ಲಿ ದಯವಿಟ್ಟು ನೋಡಿ.

---

**ಕಹಿಸೋರೆಯಗಿಡ**:—ತಂಪು ಗುಣವುಳ್ಳದು, ಪಿತ್ತವಿಕಾರ ವಿಷವಿಕಾರ-ಕೆಮ್ಮಲು-ವಾತಜ್ವರ-ಪಿತ್ತಜ್ವರಗಳನ್ನು ನಾಶ ಮಾಡು ತ್ತದೆ. ಇದರ ಎಲೆಯು ಮೊದಲು ಕಹಿಯಾಗಿದ್ದರೂ ಜಠರದಲ್ಲಿ ಪರಿಪಾಕವಾದಾಗ ಮಧುರವಾಗಿ ಪರಿಣಮಿಸುತ್ತದೆ. ಕಹಿಸೋರೆಯ ಎಲೆಗಳ ರಸವು ಮೂತ್ರಶೋಧಕವೂ, ಪಿತ್ತನಾಶಕವೂ ಆಗಿದೆ. ಇದರ ಎಲೆ, ಬೀಜ ಮತ್ತು ಬೇರುಗಳು ಔಷಧಿಗಳಿಗೆ ಅತ್ಯುಪಯೋಗಿಗ ಳಾಗಿವೆ. ವಿಷವಿಕಾರ, ಪಿತ್ತವಿಕಾರ ಮುಂತಾದುವುಗಳ ನಿವಾರಣೆಗಾಗಿ ವಾಂತಿಯನ್ನು ಮಾಡಿಸುವಂತಹ ಪ್ರಸಂಗದಲ್ಲಿ ಇದರ ಉಪಯೋಗವು ಹೆಚ್ಚಾಗಿ ಬರುತ್ತದೆ.

೧. ಕಹಿಸೋರೆಯ ರಸವನ್ನು ಜೇನುತುಪ್ಪದೊಡನೆ ಕೂಡಿಸಿ ಹಚ್ಚುವುದರಿಂದ ಕಣ್ಣುಗಳ ಪರೆಯು ಮತ್ತು ರಾತ್ರಿಯಲ್ಲಿ ಕಣ್ಣುಗಳು ಮಂಜಾಗುವುದು ಗುಣವಾಗುತ್ತದೆ.

೨. ಕಹಿ ಸೋರೇಕಾಯಿ ಅಥವಾ ಎಲೆಗಳನ್ನು ನೀರಿನೊಡನ ಅರೆದು ರಸವನ್ನು ಕುಡಿಸಿದರೆ ವಾಂತಿಯ ಮೂಲಕ ಹಾವಿನ ವಿಷವು ಇಳಿದುಹೋಗುತ್ತದೆ.

೩. ಕಹಿಸೋರೆಯ ಕಾಯಿಯನ್ನು ಚಣಕಾಮ್ಲ (ಕಡಲೆಯ ಗಿಡದಿಂದ ಸಂಗ್ರಹಿಸಿರುವ ಹುಳಿ) ದಲ್ಲಿ ನುಣ್ಣಗೆ ಅರೆದು ಮೂಲ ರೋಗದ ಮೊಳಕೆಗಳಿಗೆ ಲೇಪಿಸುತ್ತಿದ್ದರೆ ಕೆಲವು ದಿನಗಳಲ್ಲಿಯೇ ಮೊಳೆಗಳು ನಾಶವಾಗುತ್ತವೆ. ಎಷ್ಟೋ ಸಲ ಪರೀಕ್ಷಿಸಲ್ಪಟ್ಟಿದೆ.

ಅಥವಾ ಕಹಿ ಸೋರೆಯ ಕಾಯಿ ಮತ್ತು ಬೆಲ್ಲವನ್ನು ಕಡಲೆಯ ಹುಳಿಯಲ್ಲಿ ಅರೆದು ಲೇಪಿಸಿದರೂ ಮೊಳೆಗಳು ನಾಶವಾಗುತ್ತವೆ. ಇದೂ ಪರೀಕ್ಷಿಸಲ್ಪಟ್ಟಿದೆ.

೪. ಕಹಿ ಸೋರೆಯಕಾಯಿಯ ರಸವನ್ನು ನಿತ್ಯದಂತೆ ಮೂಗಿನೊಳಕ್ಕೆ ಸೇರಿಸುವುದರಿಂದ ಗಂಡಮಾಲೆಯು ಗುಣವಾಗುತ್ತದೆ. ಅಥವಾ ಕಹಿಸೋರೆಯ ರಸದಲ್ಲಿ ಹಿಪ್ಪಲಿಯ ಚೂರ್ಣವನ್ನು ಕೂಡಿಸಿ ಮೂಸಿ ನೋಡಿದರೂ ಗಂಡಮಾಲೆಯು ಗುಣವಾಗುತ್ತದೆ. ಅಥವಾ ಹಿಪ್ಪಲಿಯನ್ನು ಚೂರ್ಣಮಾಡಿ ಕಹಿ ಸೋರೆಯ ರಸದಲ್ಲಿ ೧ ದಿನ ನೆನೆಹಾಕಿದ್ದು ಅನಂತರ ಸ್ವಲ್ಪ ಆರಿಸಬೇಕು. ಪುನಃ ಇದೇ ರೀತಿಯಾಗಿ ರಸವನ್ನು ತೆಗೆದು ಹಿಪ್ಪಲಿಯ ಚೂರ್ಣವನ್ನು ನೆನೆಸಿ ಆರಿಸಬೇಕು. ಹೀಗೆ ಎಷ್ಟು ಸಾಧ್ಯವೋ ಅಷ್ಟು ಸಲ ಭಾವನೆಯನ್ನು ಕೊಟ್ಟು ಕಡೆಯಲ್ಲಿ ಚೆನ್ನಾಗಿ ಒಣಗಿಸಿ ಸೀಸೆಯಲ್ಲಿಟ್ಟುಕೊಂಡು ನಿತ್ಯದಂತೆ ಮೂಗಿಗೆ ಏರಿಸಬಹುದು ಗಂಡಮಾಲೆಗೆ ಇದೂ ಗುಣಕಾರಿಯಾಗಿದೆ.

---

**ಸೌತೇಕಾಯಿ** :—ಬೇಗ ಜೀರ್ಣವಾಗುವುದಲ್ಲ ಮಲವನ್ನು ಬಂಧಿಸುವುದು, ಮೂತ್ರವನ್ನು ಸಡಲಿಸುವುದು, ಮೂತ್ರಕಟ್ಟು, ಉರಿ ಮೂತ್ರ, ಮೂತ್ರದ ಕಲ್ಲು, ಮೂಲವ್ಯಾಧಿ, ದಾಹ, ಮೂಗು, ಬಾಯಿ, ಆಸನ ಮುಂತಾದ ಮಾರ್ಗಗಳಿಂದ ಬೀಳುತ್ತಿರುವ ರಕ್ತ, ಇವುಗಳನ್ನು ಶಾಂತಿಗೊಳಿಸುವುದು ಮತ್ತು ಶೀತ, ವಾತ, ಅಜೀರ್ಣ, ಶ್ಲೇಷ್ಮ, ತೂಲ ಇವುಗಳನ್ನುಂಟುಮಾಡುವುದು. ಎಳೆಯಕಾಯಿಯು ಪಿತ್ತವನ್ನು ಶಮನಮಾಡುವುದಲ್ಲದೆ ಬಲಕಾರಿಯೂ ಮತ್ತು ವೀರ್ಯದ ಉಷ್ಣತೆಯನ್ನು ಶಾಂತಿಗೊಳಿಸುವುದೂ ಆಗಿರುತ್ತದೆ. ಸೌತೆಯಕಾಯಿಯಲ್ಲಿ ನಾಲ್ಕೈದು ವಿಧಗಳಿರುತ್ತವೆ. ಗುಣದಲ್ಲಿ ಎಲ್ಲವೂ ಒಂದೇ ವಿಧವಾಗಿವೆ.

ಇದರ ಬೀಜಗಳ ಚೂರ್ಣವು ಮೇಹಶಾಂತಿ ಮತ್ತು ಪಿತ್ತ ಶಾಂತಿಯನ್ನುಂಟು ಮಾಡುವುದು. ಬಲ, ವೀರ್ಯಗಳನ್ನು ಹೆಚ್ಚಿಸುವುದು, ಮೂತ್ರದ ತಡೆಯನ್ನು ದೂರ ಮಾಡುವುದಲ್ಲದೆ ಬಹು ಮೂತ್ರವನ್ನೂ ತಡೆಯುವುದು.

೧. ಸೌತೆಯ ಬೀಜಗಳನ್ನು ನೊಸರಿನಲ್ಲಿ ಅರೆದು ಕುಡಿಯುವುದರಿಂದ ಮೂತ್ರಾಶ್ಮರಿ ರೋಗದಲ್ಲಿ ಬರುವ ಹೊಕ್ಕಳು ಮತ್ತು ಕಿಬ್ಬೊಟ್ಟೆಯ ವೇದನೆಯು ಶಾಂತವಾಗುತ್ತದೆ. (ವೀರ್ಯವು ಒಣಗಿ ಮೂತ್ರನಾಳದಲ್ಲಿ ಕಲ್ಲಿನಂತೆ ಗಟ್ಟಿಯಾಗಿ ನಿಂತಿರುವುದಕ್ಕೆ ಮೂತ್ರಾಶ್ಮರಿ ಅಥವಾ ಮೂತ್ರದ ಕಲ್ಲು ಎಂಬ ಹೆಸರಿದೆ ಹಿಂದುಸ್ತಾನಿಯಲ್ಲಿ 'ಪಥರಿ' ಎಂದು ಹೇಳುತ್ತಾರೆ)

೨. ಸೌತೆಯ ಬೀಜ, ಅತಿಮಧುರ, ಮರದರಶಿನ, ಈ ಮೂರನ್ನು ಸಮಭಾಗವಾಗಿ ಕುಟ್ಟಿ ಅಕ್ಕಿಯನ್ನು ತೊಳೆದ ನೀರಿನಲ್ಲಿ ಅರೆದು ಕುಡಿಯಬೇಕು. ಈ "ಏರ್ವಾರು ಬೀಜಾದಿಪಾನ" ದಿಂದ ಪಿತ್ತದ ಪ್ರಕೋಪದಿಂದುಂಟಾಗಿರುವ ಉರಿಮೂತ್ರ, ಮೂತ್ರದಕಟ್ಟು, ಇವುಗಳು ಖಂಡಿತವಾಗಿ ಗುಣವಾಗುತ್ತವೆ. ಪರೀಕ್ಷಿಸಲ್ಪಟ್ಟಿದೆ.

೩. ಸೌತೆಯಬೀಜ ಕಾಲು ತೊಲ, ಪೆಟ್ಲುಪ್ಪು ಎರಡಾಣೆ ತೂಕ, ಇವೆರಡನ್ನೂ ಕುಟ್ಟಿ ಚೂರ್ಣಿಸಬೇಕು. ಈ ಚೂರ್ಣವನ್ನು ಬಾಯಿಯಲ್ಲಿ ಹಾಕಿಕೊಂಡು ಮೇಲೆ ೧ ಪಾವು ನೊರೆಹಾಲಿಗೆ ೧ ಪಾವು ನೀರನ್ನು ಕೂಡಿಸಿ ಕುಡಿದು ಬಿಡಬೇಕು. ಮೂತ್ರನಾಳದಲ್ಲಿ ಆಗಿರುವ ಹುಣ್ಣಿನಿಂದ ಮೂತ್ರವು ಕಟ್ಟಿಕೊಂಡಿದ್ದರೆ ಈ ಪ್ರಯೋಗದಿಂದ ಮೂತ್ರವು ಹೊರಕ್ಕೆ ಬಂದುಬಿಡುತ್ತದೆ. ಮೂತ್ರದ ತಡೆಗೆ ಇದು ಸರ್ವೋತ್ಕೃಷ್ಟವಾದ ಚಿಕಿತ್ಸೆಯಾಗಿದೆ. ಜಿದರೆ ಹಾಲನ್ನು ನಿಂತಿರುವಾಗಲೇ ಕುಡಿದು ಅನಂತರ ತಿರುಗಾಡುತ್ತಲೇ ಇರಬೇಕು. ಕೂತುಕೊಳ್ಳಬಾರದು. ಇದರಿಂದ ಮೂತ್ರದಲ್ಲಿ ಸೇರಿರುವ ಉಷ್ಣತೆಯು ಸಂಪೂರ್ಣವಾಗಿ ನಾಶವಾಗುತ್ತದೆ.

೪. ಸೌತೆಯಬೀಜ, ಗುಲಾಬಿಯ ಹೂವು, ಬಿಳಿಯ ತಾವರೆಯ ಕೇಕುಗಳು, ಇವುಗಳನ್ನು ನೀರಿನೊಡನೆ ಅರೆದು ಸಕ್ಕರೆಯನ್ನು ಕೂಡಿಸಿ

ಶೋಧಿಸಿಕೊಳ್ಳಬೇಕು. ಈ ನೀರನ್ನು ಕುಡಿಯುವುದರಿಂದ ಮೂತ್ರದ ತಡೆ ಮತ್ತು ಮೂತ್ರನಾಳದ ವ್ರಣ ಇವೆರಡೂ ಬಹುಮಟ್ಟಿಗೆ ಶಾಂತವಾಗುತ್ತವೆ.

೫. ಸೌತೆಯಬೀಜ ೨ ತೊಲ, ಬಿಳಿಯ ತಾವರೆಯ ರೇಕುಗಳು ೧ ತೊಲ, ಇವೆರಡನ್ನೂ ಅರೆದು ನೀರಿನಲ್ಲಿ ಕೂಡಿಸಿ ಶೋಧಿಸಿಕೊಳ್ಳಬೇಕು. ಈ ನೀರಿಗೆ ೧ ತೊಲ ಬಿಳಿಯ ಜೀರಿಗೆಯ ಚೂರ್ಣ ಮತ್ತು ೪ ತೊಲ ಸಕ್ಕರೆಯನ್ನು ಕೂಡಿಸಿ ಕುಡಿಯಬೇಕು. ಈ ಪ್ರಯೋಗದಿಂದ ಫಿರಂಗಿ (ಮೂತ್ರನಾಳದಲ್ಲಿ ಆಗಿರುವ ಮೇಹದ ಹುಣ್ಣು) ರೋಗದಲ್ಲಿ ಉಂಟಾಗುವ ಮೂತ್ರದ ತಡೆಯು ದೂರವಾಗಿ ಮೂತ್ರವು ನಿರ್ಮಲವಾಗುತ್ತದೆ. ಸ್ತ್ರೀಯರು ೭ ದಿನಗಳ ವರೆಗೆ ಈ ಚಿಕಿತ್ಸೆಯನ್ನು ಮಾಡಿಕೊಂಡರೆ ಶ್ವೇತಪ್ರದರವು (ಬಿಳುಪು) ಅವಶ್ಯವಾಗಿ ಗುಣವಾಗುತ್ತದೆ.

೬. ಸೌತೇಗಿಡದಬೇರನ್ನುತಂದು ಅರೆದು ಜೇನುತುಪ್ಪ ಮತ್ತು ಅಕ್ಕಿಯನ್ನು ತೊಳೆದ ನೀರಿನೊಡನೆ ಕೂಡಿಸಿ ಕುಡಿಯುವುದರಿಂದ ಮೂಗು, ಬಾಯಿ, ಆಸನಗಳಿಂದ ಬೀಳುವ ರಕ್ತ (ರಕ್ತಪಿತ್ತರೋಗ)ವು ನಿಲ್ಲುತ್ತದೆ.

ನಾವು ಉಪಯೋಗಿಸತಕ್ಕ ತರಕಾರಿ ಮತ್ತು ಹಣ್ಣುಗಳಲ್ಲಿ ಕೆಲವು ಚರ್ಮವನ್ನು ನಿರ್ಮಲಗೊಳಿಸುವುದರಲ್ಲಿಯೂ ವರ್ಣವನ್ನು ಉಜ್ವಲಗೊಳಿಸುವುದರಲ್ಲಿಯೂ ಹೆಸರುಗೊಂಡಿವೆ. ಸೌತೆಯ ಕಾಯಿ, ನಿಂಬೆಯಹಣ್ಣು, ಸಿಹಿನಿಂಬೆಯ ಹಣ್ಣು, ದ್ರಾಕ್ಷಿ, ಟೊಮೇಟೋ, ಕಿತ್ತಳೆಯ ಹಣ್ಣಿನ ಸಿಪ್ಪೆ ಇವುಗಳನ್ನು ಮುಖಕ್ಕೆ ತಿಕ್ಕುವುದರಿಂದ ಮುಖದ ಕಪ್ಪುಕಲೆಗಳು, ಚಿಬ್ಬು ಮುಂತಾದುವುಗಳು ನಾಶವಾಗುತ್ತವೆ ಮತ್ತು ಚರ್ಮವು ಮೃದುವೂ, ನುಣುಪೂ, ಕಾಂತಿಯುಕ್ತವೂ ಆಗಿ ಮುಖವು ಬಹು ತೇಜೋಮಯವಾಗುತ್ತದೆ.

೭. ಸೌತೆಯ ಕಾಯಿಯನ್ನು ಹೊಸದಾಗಿ ತಂದು ಕತ್ತರಿಸಿ ಒಂದೊಂದು ತುಂಡನ್ನು ತೆಗೆದುಕೊಂಡು ಮೆಲ್ಲಮೆಲ್ಲನೆ ಮುಖಕ್ಕೆ

ತ್ತಿಕ್ಕಬೇಕು. ಇದರಿಂದ ಚರ್ಮಗತವಾದ ಮಾಲಿನ್ಯವು ದೂರವಾಗಿ ಬಣ್ಣವು ಸ್ವಚ್ಛವಾಗುತ್ತದೆ. ಕೆಲವು ದಿನಗಳ ವರೆಗೆ ಈ ಸುಲಭ ಪ್ರಯೋಗವನ್ನು ನಿತ್ಯದಲ್ಲಿ ಅವಕಾಶವಿದ್ದಾಗ ಅನುಸರಿಸತಕ್ಕವರಿಗೆ ಬಹುಬೆಲೆಯ ಪೌಡರ್, ಸ್ನೋ, ಮುಂತಾದುವುಗಳಿಂದ ಉಂಟಾಗ ದಿರುವ ಪ್ರಯೋಜನವು ಇದರಿಂದ ಅವಶ್ಯವಾಗಿ ದೊರೆಯುತ್ತದೆ. ದಯವಿಟ್ಟು ಧೈರ್ಯದಿಂದ ಪರೀಕ್ಷಿಸಬೇಕು.

ದಿಲ್ಲಿಯ ನಿವಾಸಿಗಳಾದ "ಡಾ. ಆಚಾರ್ಯ ಚತುರಸೇನ ಶಾಸ್ತ್ರಿಗಳು ಆಯುರ್ವೇದಾಚಾರ್ಯ" ಇವರು ಒಂದು ಸಲ ಕಾಶಿಗೆ ಬಂದಿದ್ದಾಗ "ಸೌಂದರ್ಯ ವರ್ಧನೆಗೆ ಸುಲಭ ಪ್ರಯೋಗಗಳು" ಎಂಬ ವಿಷಯವಾಗಿ ಮಾತನಾಡುವಾಗ ಮುಖಸೌಂದರ್ಯದ ವರ್ಧನಕ್ಕಾಗಿ ಕೆಲವು ಪ್ರಯೋಗಗಳನ್ನು ಹೇಳಿದ್ದರು. ಅವುಗಳನ್ನು ಪಾಠಕರ ಉಪಯೋಗಕ್ಕಾಗಿ ಇಲ್ಲಿ ಬರೆದಿರುವುದಾಗಿದೆ.

೮. ಸೌತೆಯ ಕಾಯಿಯನ್ನು ತಂದು ಸಣ್ಣ ಸಣ್ಣ ಚೂರುಗಳನ್ನು ಮಾಡಿ ಅರ್ಧಸೇರು ನೀರಿನಲ್ಲಿ ಹಾಕಿ ಸ್ವಲ್ಪ ಕುದಿಸಬೇಕು. ಅನಂತರ ಅದರಲ್ಲಿ ೧ ಚಮಚದಷ್ಟು ಬೋರಿಕ್ ಎಸಿಡ್ಡನ್ನು ಹಾಕಿ ಆ ನೀರಿನಿಂದ ಮುಖವನ್ನು ಉಜ್ಜಿ ತೊಳೆಯುವುದರಿಂದ ಕಲೆಗಳು ನಾಶವಾಗಿ ಬಣ್ಣವು ಪ್ರಕಾಶಮಯವಾಗುತ್ತದೆ.

೯. ಸೌತೆಯ ಕಾಯಿಯನ್ನು ಕುಟ್ಟಿ ರಸವನ್ನು ತೆಗೆದು ಆ ರಸಕ್ಕೆ ಸಮವಾಗಿ "ಅಲಕಾರಲ್" ಎಂಬುದನ್ನು ಕೂಡಿಸಬೇಕು. ಇವೆರಡಕ್ಕೆ ಸಮವಾಗಿ "ಸ್ಪರ್ ಮೆಸಿಟಿ" ಎಂಬುದನ್ನು ಸೇರಿಸಬೇಕು. ಈ ಮೂರು ವಸ್ತುಗಳೂ ಸೇರಿ ಇದು ಹಾಲಿನ ಕೆನೆಯಂತಾಗುವುದು. ಇದನ್ನು ಮುಖಕ್ಕೆ ತಿಕ್ಕಬೇಕು ಈ ಪ್ರಯೋಗವು ಮುಖದ ಬಣ್ಣವನ್ನು ಉಜ್ವಲಗೊಳಿಸುವುದರಲ್ಲಿ ಅದ್ವಿತೀಯವಾಗಿದೆಯೆಂದು ಆಚಾರ್ಯರು ಬಹಳ ಪ್ರಶಂಸಿಸಿರುತ್ತಾರೆ.

ಪ್ರಾತಃಕಾಲದಲ್ಲಿ ಮುಖವನ್ನು ತೊಳೆದ ಮೇಲೆ ನಿಂಬೆಯ ಹಣ್ಣಿನ ರಸ ಮತ್ತು ಗ್ಲೆಸರೀನ್ ಇವೆರಡನ್ನು ಕೂಡಿಸಿ ಮುಖಕ್ಕೆ

ಹಚ್ಚಿ ಮೆಲ್ಲನೆ ತಿಕ್ಕಬೇಕು ಸ್ವಲ್ಪ ಹೊತ್ತಾದಮೇಲೆ ಬಿಸಿನೀರಿನಿಂದ ತೊಳೆದುಕೊಳ್ಳಬೇಕು. ಇದರಿಂದ ಚರ್ಮವು ಸ್ವಚ್ಛವಾಗುವುದಲ್ಲದೆ ಮುಖದ ಬಣ್ಣವು ಕಾಂತಿಮಯವಾಗುವುದು.

ಟೊಮೇಟೋ ಅಥವಾ ಹಸಿಯ ದ್ರಾಕ್ಷಿಯನ್ನು ಮುಖಕ್ಕೆ ತಿಕ್ಕುವುದರಿಂದ ಬಿಸಲಿನ ತಾಪದಿಂದುಂಟಾಗಿರುವ ಮುಖದ ಮೇಲಿನ ಕಪ್ಪುಛಾಯೆಯು ಕೂಡಲೇ ನಾಶವಾಗುತ್ತದೆ ಮತ್ತು ಮುಖವು ಗುಲಾಬಿಯ ಬಣ್ಣಕ್ಕೆ ತಿರುಗಿ ಬಹು ಸುಂದರವಾಗುತ್ತದೆ. ರಸವನ್ನು ಹಚ್ಚಿ, ಚೆನ್ನಾಗಿ ಉಜ್ಜಬೇಕು. ಅನಂತರ ನೀರಿನಿಂದ ತೊಳೆಯಬೇಕು. ಹಣ್ಣಾಗಿರುವ ಸಿಹಿನಿಂಬೆಯರಸದಲ್ಲಿ ಜವೆಯ ಅಥವಾ ಹೆಸರಿನ ಅಥವಾ ಕೆಂಪು ಬೇಳೆಯ ಹಿಟ್ಟನ್ನು ಕೂಡಿಸಿ ಮುಖಕ್ಕೆ ಹಚ್ಚಿ, ಮೆಲ್ಲನೆ ಸ್ವಲ್ಪ ಹೊತ್ತು ತಿಕ್ಕಿ ಅನಂತರ ನೀರಿನಿಂದ ತೊಳೆಯಬೇಕು' ಈ ಪ್ರಯೋಗ ದಿಂದ ಸ್ವಾಭಾವಿಕವಾದ ಕಪ್ಪು ಬಣ್ಣವೂ ಸಹ ಉಜ್ವಲವಾಗಿ ಮುಖವು ಸುಂದರವಾಗುತ್ತದೆ. ಈ ಕೆಲಸಕ್ಕೆ ಕಿತ್ತಳೆಯ ಹಣ್ಣನ್ನೂ ಉಪ ಯೋಗಿಸಬಹುದು. ಹಣ್ಣಿನ ಉಪಯೋಗವಾದನಂತರ ಅದರ ಸಿಪ್ಪೆಯನ್ನು ಬಿಸಾಡಬಾರದು. ಆ ಸಿಪ್ಪೆಯ ಮೇಲ್ಭಾಗದಿಂದ ಮುಖ ವನ್ನು ಉಜ್ಜಬೇಕು. ಕಿತ್ತಳೆಯ ಹಣ್ಣಿನ ಸಿಪ್ಪೆಯ ರಸದಲ್ಲಿ ಕ್ವಿನೈನಿ ನಲ್ಲಿರುವಂತಹ ಗುಣವಿದೆ ಮತ್ತು ಚರ್ಮದ ದೋಷವನ್ನುನಿವಾರಿಸತಕ್ಕ ಶಕ್ತಿಯು ವಿಶೇಷವಾಗಿದೆ ಈ ಪ್ರಯೋಗದಿಂದ ಮುಖದ ಮೇಲಿನ ಮಾಲಿನ್ಯವೆಲ್ಲಾ ನಾಶವಾಗಿ ಕೆಲವು ದಿನಗಳಲ್ಲಿ ಮುಖವು ಕಾಂತಿ ಯುಕ್ತವಾಗುತ್ತದೆ. ಕಿತ್ತಳೆಯ ಹಣ್ಣಿನ ಸಿಪ್ಪೆಯ ಕಷಾಯವು ಮಲೇರಿಯಾ ಜ್ವರಕ್ಕೆ ಸಿದ್ಧೌಷಧವಾಗಿದೆ.

ಜವೆ, ಕಡಲೆ, ಕೆಂಪು ತೊಗರಿಯ ಬೇಳೆ, ಹೆಸರು, ಬಟಾಣಿ ಇವುಗಳ ಹಿಟ್ಟುಗಳನ್ನು ಮುಖಕ್ಕೆ ಮತ್ತು ಶರೀರಕ್ಕೆ ಹಚ್ಚಿ ತಿಕ್ಕು ವುದೂ ಬಹಳ ಲಾಭದಾಯಕವಾಗಿದೆ.

ಕಲೌಂಜಿ ಜೀರಿಗೆ (ಇದನ್ನು ಕರಿಯ ಜೀರಿಗೆಯೆಂತಲೂ ಕರೆಯುತ್ತಾರೆ) ಯೊಂದನ್ನೇ ನೀರಿನೊಡನೆ ಅರೆದು ಮುಖ ಮತ್ತು ಶರೀರಕ್ಕೆ ಹಚ್ಚಿ, ತಿಕ್ಕಬೇಕು. ಸ್ವಲ್ಪ ಹೊತ್ತಾದನಂತರ ತೊಳೆಯು

ವಾಗ ಅಕ್ಕಿಯ ಹಿಟ್ಟನ್ನು ಉಜ್ಜಿ ತೊಳೆಯಬೇಕು. ಕೆಲವು ದಿನಗಳ ವರೆಗೆ ಈ ಪ್ರಯೋಗವನ್ನು ಅನುಸರಿಸುವುದರಿಂದ ಚರ್ಮದ ಬಣ್ಣವು ಬಹಳ ಸ್ವಚ್ಛವಾಗುತ್ತದೆ.

ಪೆಟ್ಲುಪ್ಪು, ಹರತಾಳ, ಇವೆರಡನ್ನೂ ಕಾಲು ಕಾಲು ತೊಲದಂತೆ ತಂದು ಅರೆದು ೩ ಭಾಗಮಾಡಬೇಕು. ಒಂದು ಭಾಗವನ್ನು ನೀರಿನೊಡನೆ ಕೂಡಿಸಿ ಮುಖಕ್ಕೆ ಹಚ್ಚಿ ೧ ಗಂಟೆಯವರೆಗೆ ಬಿಸಿಲಿನಲ್ಲಿ ಕುಳಿತುಕೊಳ್ಳಬೇಕು. ಅನಂತರ ಬಿಸಿನೀರಿನಿಂದ ತೊಳೆದು ಬಿಡಬೇಕು. ಹೀಗೆ ೩ ದಿನಗಳ ವರೆಗೆ ಮಾಡಿದರೆ ಮುಖದ ಮೇಲಿರುವ ಕಪ್ಪು ಕಲೆಗಳು ದೂರವಾಗುತ್ತವೆ.

ಬೋರಿಕ್ ಏಸಿಡ್ಡನ್ನು ಶ್ರೀಗಂಧದ ಚಕ್ಕೆಯ ಗಂಧದೊಡನೆ ಕೂಡಿಸಿ ಮುಖದಮೇಲೆ ಲೇಪಿಸುವುದರಿಂದ ಬಿಳಿಯ ಚಿಬ್ಬು ಅಥವಾ ಬಿಳಿಯ ಕಲೆಯು ನಾಶವಾಗುತ್ತದೆ.

ನೊರೆಹಾಲಿನಿಂದ ಮುಖ ಮತ್ತು ಕುತ್ತಿಗೆಯನ್ನು ಉಜ್ಜುವುದಾದರೆ ಮಾಂಸವು ಪುಷ್ಟವಾಗಿ ಮುಖವು ತುಂಬಿಕೊಳ್ಳುತ್ತದೆ ಮತ್ತು ಕುತ್ತಿಗೆಯು ಪರಿಪುಷ್ಟವಾಗುತ್ತದೆ. ಬೆಣ್ಣೆಯನ್ನು ತೆಗೆದ ಹಾಲನ್ನು ಬೇಕಾದರೂ ಉಪಯೋಗಿಸಬಹುದು. ಇದು ಅಗ್ಗವಾಗಿಯೂ ದೊರೆಯುತ್ತದೆ. ಈ ಪ್ರಯೋಗಗಳನ್ನೆಲ್ಲಾ ಆಯುರ್ವೇದ-ಯುನಾನಿ-ಎಲೋಪೇಥಿ ಚಿಕಿತ್ಸೆಗಳಲ್ಲಿ ಅದ್ವಿತೀಯ ಪಂಡಿತರಾಗಿರುವ ಮತ್ತು ಶಾಸ್ತ್ರ, ಅನುಭವಗಳ ಜ್ಞಾನದಿಂದ ಪರಿಪೂರ್ಣರಾಗಿರುವ ಆಯುರ್ವೇದಾಚಾರ್ಯ, ಡಾ॥ ಚತುರಸೇನ ಶಾಸ್ತ್ರಿಗಳೇ ಪ್ರಚಾರ ಮಾಡಿರುತ್ತಾರೆ. ಪಾಠಕರು ಉದಾಸೀನಮಾಡದೆ ಈ ಪ್ರಯೋಗಗಳನ್ನು ಆಚರಣೆಯಲ್ಲಿ ತಂದರೆ ಹಣದ ಉಳಿತಾಯದ ಜತೆಗೆ ಅನಾಯಾಸದಿಂದ ವಿಶೇಷ ಪ್ರಯೋಜನವೂ ಲಭಿಸುತ್ತದೆ.

---

**ನುಗ್ಗೆಯಕಾಯಿ :**—ಸಿಹಿ ಮತ್ತು ಒಗರು, ಕಫ ಪಿತ್ತಗಳನ್ನು ನಾಶಗೊಳಿಸುವುದೂ, ಜಠರಾಗ್ನಿಯನ್ನು ಅತಿಶಯವಾಗಿ ವೃದ್ಧಿಗೊಳಿಸು

ವುದು, ಮತ್ತು ತೂಲ, ಕುಷ್ಠ, ಕ್ಷಯ, ಉಬ್ಬಸ, ಗುಲ್ಮ, ಈ ರೋಗಗಳನ್ನು ನಾಶಮಾಡುತ್ತದೆ.

೧. ನುಗ್ಗೆಯ ಮರದ ಚಕ್ಕೆ ಮತ್ತು ದೇವದಾರು ಚಕ್ಕೆ ಇವೆರಡನ್ನು ಮಜ್ಜಿಗೆಯಲ್ಲಿ ಅರೆದು ಲೇಪಿಸುತ್ತಿದ್ದರೆ ಗಂಡಮಾಲೆಯು ಗುಣವಾಗುತ್ತದೆ.

೨. ನುಗ್ಗೆಯ ಕಾಯಿಯ ಬೀಜ, ಸಾಸಿವೆ, ಅಗಸೆಬೀಜ, ಜವೆಗೋಧಿ, ಇವುಗಳನ್ನು ಹುಳಿಮಜ್ಜಿಗೆಯಲ್ಲಿ ಅರೆದು ಲೇಪಿಸುವುದರಿಂದ ಗಂಡಮಾಲೆ, ಇತರ ವಿಧ ಗಡ್ಡೆಗಳು, ಬಾವು, ಇವುಗಳು ಕರಗಿ ಹೋಗುತ್ತವೆ.

೩. ನುಗ್ಗೆಯ ಕಾಯಿಯ ಬೀಜ, ಮೂಲಂಗಿಯ ಬೀಜ, ಇವುಗಳನ್ನು ಎಮ್ಮೆಯ ಮಜ್ಜಿಗೆಯಲ್ಲಿ ಅರೆದು ಲೇಪಿಸುವುದರಿಂದ ಗಂಡಮಾಲೆ ಮತ್ತು ಇತರ ಗಡ್ಡೆಗಳು ಕರಗುತ್ತವೆ.

೪. ನುಗ್ಗೆಯ ಬೀಜ, ತುಲಸಿ, ಜವೆಗೋಧಿ, ಮೂಲಂಗಿಯ ಬೀಜ, ಕಣಗಲುಗಿಡದ ಬೇರು, ಇವುಗಳನ್ನು ಮಜ್ಜಿಗೆಯಲ್ಲಿ ಅರೆದು ಲೇಪಿಸುವುದರಿಂದ ಸಕಲ ವಿಧ ಗಡ್ಡೆಗಳು ಮತ್ತು ಗಂಡಮಾಲೆಯೂ ಬಾವುಗಳೂ, ಶಾಂತವಾಗುತ್ತವೆ.

೫. ನುಗ್ಗೆಮರದ ಚಕ್ಕೆ, ದತ್ತೂರಿ ಎಲೆ, ಅರಳುಬೇರು, ಕೊಮ್ಮೆಬೇರು, ಲಕ್ಕಿಸೊಪ್ಪು, ಸಾಸಿವೆ, ಇವುಗಳನ್ನು ಸಮವಾಗಿ ತಂದು ನೀರಿನೊಡನೆ ಅರೆದು ಕುದಿಸಿ ಲೇಪಿಸುವುದರಿಂದ ಆನೆಯ ಕಾಲಿನಂತೆ ಬಾತಿರುವ ಕಾಲಿನ ಬಾವು ಇಳಿದುಹೋಗುತ್ತದೆ.

೬. ನುಗ್ಗೆಯ ಬೀಜ, ನುಗ್ಗೆಯ ಸೊಪ್ಪು, ಹಿಪ್ಪಲಿ, ಸೈಂಧವ ಲವಣ, ಶುಂಠಿ, ಹತ್ತಿಯಬೀಜ, ಹುರುಳಿ, ಎಳ್ಳು, ತುಲಸಿ, ಸಾಸಿವೆ, ಸಬ್ಬಸಿಗೆ ಬೀಜ, ಇವುಗಳಲ್ಲಿ ಸಮಯಕ್ಕೆ ಎಷ್ಟು ಸಿಕ್ಕರೆ ಅಷ್ಟನ್ನೇ ಹುಳಿಮಜ್ಜಿಗೆ ಅಥವಾ ನಿಂಬೆಹಣ್ಣಿನ ರಸದಲ್ಲಿ ಅರೆದು ಉಂಡೆಯನ್ನು ಮಾಡಿ ಬಟ್ಟೆಯಲ್ಲಿ ಕಟ್ಟಿ ಕೆಂಡದ ಮೇಲೆ ಬಿಸಿ ಮಾಡಿ-ಮಾಡಿ

ಮೆಲ್ಲನೆ ಬಾವುಗಳಿಗೆ ಸೇಕವನ್ನು ಕೊಡುತ್ತಿದ್ದರೆ ಸಕಲ ವಿಧ ವಾಯು ಸಂಬಂಧಗಳಾದ ಬಾವುಗಳು ನಿಸ್ಸಂಶಯವಾಗಿ ದೂರವಾಗುತ್ತವೆ.

೭. ನುಗ್ಗೆಯ ಎಲೆಯನ್ನು ಶುದ್ಧವಾದ ಎಳ್ಳೆಣ್ಣೆಯಲ್ಲಿ ಸಮಭಾಗವಾಗಿ ಅರೆದು ಪಟು ತಗಲಿದ ಸ್ಥಳಕ್ಕೆ ಹಚ್ಚಿ ಬಿಸಿಲಿನಲ್ಲಿ ಕಾಯಿಸಿದರೆ ಬಾಧೆಯು ಕಮ್ಮಿಯಾಗುತ್ತದೆ.

೮. ನುಗ್ಗೆಯಮರದ ಬೇರನ್ನು ನೀರಿನೊಡನೆ ಅರೆದು ಹಚ್ಚುವುದರಿಂದ ನವೆ, ಹುಳಕಡ್ಡಿ, ಮುಂತಾದುವುಗಳು ಗುಣವಾಗುತ್ತವೆ.

೯. ನುಗ್ಗೆಯಮರದ ಚಕ್ಕೆ, ಬೇರು, ಎಲೆ, ಬೀಜ, ಹೂವು, ಇವುಗಳನ್ನು ಸಮವಾಗಿ ಸಂಗ್ರಹಿಸಿ ಕುಟ್ಟಿ ರಸವನ್ನು ತೆಗೆದು, ರಸದ ಕಾಲು ಪಾಲು ಶುದ್ಧವಾದ ಕರಿ ಎಳ್ಳೆಣ್ಣೆಯಲ್ಲಿ ಆ ರಸವನ್ನು ಕುದಿಸಬೇಕು, ರಸವು ಇಂಗಿ ಎಣ್ಣೆ ಮಾತ್ರ ಉಳಿದ ಮೇಲೆ ಶೋಧಿಸಿಕೊಳ್ಳಬೇಕು. ಇದರ ಲೇಪನದಿಂದ ಎಂತಹ ನವೆಯಾದರೂ ವಾಸಿಯಾಗುತ್ತದೆ.

೧೦. ನುಗ್ಗೆಯ ಎಲೆಯನ್ನು ನೀರಿನೊಡನೆ ಅರೆದು ಕೆಲವು ಹನಿಗಳನ್ನು ಮೂಗಿಗೆ ಹಿಂಡಿದರೆ ಶೀತದ ತಲೆನೋವು ನಿಲ್ಲುತ್ತದೆ.

೧೧. ನುಗ್ಗೆಯ ಸೊಪ್ಪು ೧ ತೊಲ, ರಾಳ ೨ ತೊಲ, ಸಾಬೂನು ಕಾಲು ತೊಲ, ಅಫೀಮು ೧ ತೊಲ, ಇವುಗಳನ್ನು ಕುಟ್ಟಿ ಅರೆದು ೭ ತೊಲ ಎಳ್ಳೆಣ್ಣೆಯಲ್ಲಿ ಹಾಕಿ ಬೇಯಿಸಿ, ಮುಲಾಮಿನಂತೆ ಮಾಡಿ ಇಟ್ಟುಕೊಳ್ಳಬೇಕು. ಇದನ್ನು ವೀಳೆಯ ಎಲೆಗೆ ಹಚ್ಚಿ ನಾರು ಹುಣ್ಣಿಗೆ ಕಟ್ಟುತ್ತಿರಬೇಕು. ಪ್ರಾತಃಕಾಲದ ಕಟ್ಟನ್ನು ಸಾಯಂಕಾಲಕ್ಕೆ ತೆಗೆದುಹಾಕಿ ಬೇರೆ ಕಟ್ಟಬೇಕು. ಇದೇ ರೀತಿಯಾಗಿ ಮೂರು ದಿನಗಳು ಮಾಡುತ್ತಿದ್ದರೆ ದಾರವು ಪೂರ್ತಿಯಾಗಿ ಹೊರಗೆ ಬಂದು ಬಿಡುತ್ತದೆ.

೧೨. ಐದು ತೊಲ ನುಗ್ಗೆಸೊಪ್ಪನ್ನು ಒಂದು ಸೇರು ನೀರಿನಲ್ಲಿ ಕುದಿಸಿ ಅರ್ಧ ಸೇರಿಗೆ ಕಷಾಯವನ್ನಿಳಿಸಿ ಶೋಧಿಸಿಕೊಳ್ಳಬೇಕು, ಈ ಕಷಾಯದಲ್ಲಿ ಹುರಿದ ಉರುಳಿಯ ೨ ತೊಲ ನುಚ್ಚನ್ನು ಹಾಕಿ

ಘಾತಕವೂ ವಿಷಪ್ರಾಯವೂ ಆಗಿರುತ್ತವೆ. ಈ ತತ್ವವನ್ನು ನಮ್ಮ ಪ್ರಾಚೀನರು ಸಾವಿರಾರು ವರ್ಷಗಳ ಹಿಂದೆಯೇ ತಿಳಿದು ಆಚರಿಸಿ ಲೋಕೋಪಕಾರಕ್ಕಾಗಿ ಪ್ರಚಾರ ಮಾಡಿರುತ್ತಾರೆ ಇದನ್ನು ಈಗಿನ ವಿಜ್ಞಾನಶಾಸ್ತ್ರಪಂಡಿತರು ಬಹು ಪರಿಶ್ರಮದಿಂದ ಕಂಡು ಹಿಡಿದು ಈಗ ಹೇಳುತ್ತಿರುವರು ! ಯುರೋಪ್ ಮತ್ತು ಅಮೇರಿಕಾ ದೇಶದಲ್ಲಿ ಲಕ್ಷಾಂತರ ಜನರು ಸೌಮ್ಯಜೀವನದಕ್ರಮವನ್ನುಕೈಗೊಂಡು ಕೇವಲ ಹಣ್ಣುಗಳನ್ನೇ ಸೇವಿಸುತ್ತ ಆಶಾತೀತವಾದ ಆನಂದವನ್ನು ಅನುಭವಿಸಿ ನಮ್ಮ ಭಾರತೀಯರ ಹಿಂದಿನ ಸಾತ್ವಿಕ ಜೀವನಕ್ಕೆ ತಲೆ ಬಾಗಿಸುತ್ತಾರೆ.

ಎಲ್ಲಿನ ವರೆಗೆ ಜೀವ ಮತ್ತು ಹಣ್ಣುಗಳು ಇರುವುವೋ ಅಲ್ಲಿನ ವರೆಗೆ ಆಶೆ ! ಎಂಬುದೇ ನವೀನ ವಿಜ್ಞಾನ ಶೋಧಕರ ಮತವಾಗಿದೆ. ಈ ಮತವನ್ನು ಅನೇಕ ಪಾಶ್ಚಾತ್ಯ ವಿದ್ವಾಂಸರು ಸಮರ್ಥಿಸಿಯೂ ಇರುತ್ತಾರೆ. ಹಣ್ಣುಗಳ ಆಹಾರವು ಮನುಷ್ಯನಿಗೆ ಸ್ವಾಭಾವಿಕ ಭೋಜನವಾಗಿರುವುದಲ್ಲದೆ ಹಣ್ಣುಗಳಲ್ಲಿ ಅನೇಕ ರೋಗಗಳನ್ನು ನಾಶಪಡಿಸ ತಕ್ಕ ಉತ್ಕೃಷ್ಟಗುಣವೂ ಇರುತ್ತದೆ. ಹಸಿಯದ್ರಾಕ್ಷಿಯು ಜೀರ್ಣಶಕ್ತಿಯನ್ನು ಸರಿಪಡಿಸುವುದೆಂಬುದು ಪ್ರಸಿದ್ಧವಾಗಿದೆ. ಇದೇ ರೀತಿಯಾಗಿ ಹೃದಯದ ಬೇನೆಯನ್ನು ನಾಶಪಡಿಸುವುದರಲ್ಲಿ ಮತ್ತು ಸಂಧಿವಾತ ರೋಗವನ್ನು ಗುಣಪಡಿಸುವುದರಲ್ಲಿ ನಿಂಬೆಹಣ್ಣು ಮತ್ತು ಕಿತ್ತಳೆ ಹಣ್ಣು ಪ್ರಸಿದ್ಧವಾಗಿದೆ. ಈ ಎರಡು ಹಣ್ಣುಗಳ ಪ್ರಭಾವವು ಹೃದಯ ಮತ್ತು ಕೀಲುಗಳ ಮೇಲೆ ವಿಚಿತ್ರ ರೀತಿಯಿಂದ ಉಂಟಾಗುತ್ತದೆ. ಆದರೆ ಈ ಗೂಢ ತತ್ವವನ್ನು ಸಾಮಾನ್ಯವಾಗಿ ಯಾರೂ ಅರಿತಿಲ್ಲ. ಇಷ್ಟೇಕೆ ! ದೊಡ್ಡದೊಡ್ಡ ವೈದ್ಯರು ಮತ್ತು ಡಾಕ್ಟರುಗಳೂ ಸಹ ಈ ಹಣ್ಣುಗಳಿಂದ ವಿಶೇಷ ಪ್ರಯೋಜನವನ್ನು ಹೊಂದುತ್ತಿಲ್ಲ ಇದನ್ನು ನೋಡಿ ವಾಚಕರು ಬಹುಕಾಲದಿಂದ ಅಭ್ಯಸ್ತವಾದ ತಮ್ಮ ಆಹಾರವನ್ನು ಒಮ್ಮಿಂದೊಮ್ಮೆ ಬಿಟ್ಟು ಫಲಾಹಾರವನ್ನು ಅನುಸರಿಸಬೇಕೆಂದು ಭಾವಿಸಬಾರದು. ರೋಗಿಗಳೂ ಸಹ ತಿಳಿಯದೆ ಮಿತಿಮೀರಿ ಹಣ್ಣುಗಳನ್ನು ಸೇವಿಸಿ ತಮ್ಮ ಸ್ಥಿತಿಯನ್ನು ಒಮ್ಮಿಂದೊಮ್ಮೆ ಬದಲಾಯಿಸಿಕೊಳ್ಳುವಂತಹ ಕೆಲಸವನ್ನುಮಾಡಬಾರದು. ಯಾರಜೀರ್ಣಶಕ್ತಿಯು ಸರಿಯಾಗಿಲ್ಲವೋ ಅವರು ಒಂದುದಿನಕ್ಕೆ ಒಂದು ಸೇರಿನಂತೆ ಹಸಿಯ

ದ್ರಾಕ್ಷೆಯನ್ನು (ಕಾಬೂಲ್ ದ್ರಾಕ್ಷೆಯಾದರೆ ಉತ್ತಮ) ಆರಂಭಿಸಿ ಮೂರು ನಾಲ್ಕು ಸೇರಿನ ವರೆಗೂ ತಿನ್ನಬಹುದು. ದ್ರಾಕ್ಷೆಯ ಅಳತೆಯು ಹೆಚ್ಚಿದಂತೆಲ್ಲಾ ನಿತ್ಯದ ಆಹಾರವನ್ನು ಕಡಿಮೆಮಾಡುತ್ತ ಕಡೆಯಲ್ಲಿ ಒಂದು ವಾರದ ವರೆಗೆ ಎಲ್ಲಾ ಆಹಾರಗಳನ್ನೂ ಬಿಟ್ಟು, ಕೇವಲ ದ್ರಾಕ್ಷೆಯೊಂದನ್ನೇ ಉಪಯೋಗಿಸುವುದುತ್ತಮ.

ಯಾರು ಮಿತಿಮೀರಿದ ಭೋಜನದ ಅಭ್ಯಾಸದಿಂದ ಅಜೀರ್ಣ ರೋಗವನ್ನು ಅನುಭವಿಸುತ್ತಿರುವರೋ, ಯಾರು ಇಂತಹ ರೋಗದಿಂದ ದೂಷಿತವಾದ ರಕ್ತದಿಂದುದಯಿಸುವ ತೊಂದರೆಗಳನ್ನು ನಿತ್ಯದಲ್ಲಿ ಅನುಭವಿಸುತ್ತ, ತೇಜೋಹೀನರಾಗಿ ಜೀವದ ಹೆಣದಂತೆ ಕಾಣಿಸುವರೋ, ಅವರಿಗೆ ದ್ರಾಕ್ಷೆಯ ಚಿಕಿತ್ಸೆಯು ಅತ್ಯುಪಯುಕ್ತವಾಗಿರುವುದಲ್ಲದೆ ಆಶ್ಚರ್ಯಜನಕವಾದ ಫಲವನ್ನುಂಟುಮಾಡುತ್ತದೆ. ಫ್ರಾನ್ಸಿನ ದಕ್ಷಿಣ ಪ್ರಾಂತ್ಯಗಳಲ್ಲಿ ದ್ರಾಕ್ಷೆಯನ್ನು ವಿಶೇಷವಾಗಿ ಬೆಳೆಯಿಸುತ್ತಾರೆ. ಅಲ್ಲಿಂದ ಕಾಶಿಯ ವಿಶ್ವವಿದ್ಯಾಲಯಕ್ಕೆ ಬಂದಿದ್ದ ಒಬ್ಬ ಚಿಕಿತ್ಸಕರು ದ್ರಾಕ್ಷೆಯ ಮಹತ್ವವನ್ನುಬಹಳವಾಗಿ ಹೊಗಳಿರುತ್ತಾರೆ. ಆ ದೇಶದಲ್ಲಿ ಒಂದಾಣೆಗೆ ಒಂದು ಪೌಂಡು ದ್ರಾಕ್ಷೆಯು ಮಾರಲ್ಪಡುತ್ತದೆಂದು ಅವರೇ ಹೇಳಿದರು. ಮತ್ತು ಕ್ಷಯದಿಂದ ಬಳಲುತ್ತಿರುವ ಕೆಲವು ರೋಗಿಗಳಿಗೆ ಕೇವಲ ದ್ರಾಕ್ಷೆಯನ್ನೇ ತಿನ್ನಿಸಿ ಅವರ ರೋಗವನ್ನುಸಂಪೂರ್ಣವಾಗಿ ಗುಣಪಡಿಸಿರುತ್ತಾರೆ. ಇತರ ಎಲ್ಲಾ ಆಹಾರವನ್ನೂಬಿಟ್ಟು ದ್ರಾಕ್ಷೆಯೊಂದನ್ನೇ ಸೇವಿಸುವ ಕ್ಷಯರೋಗಿಗಳು ಕೆಲವು ದಿನಗಳಲ್ಲಿಯೇ ಹೃಷ್ಟಪುಷ್ಟರಾಗಿ ವಿಶೇಷ ಬಲಶಾಲಿಗಳಾಗುತ್ತಾರೆಂಬುದನ್ನು ಆ ಫ್ರಾನ್ಸಿನಚಿಕಿತ್ಸಕರು ಒತ್ತಿಹೇಳಿರುತ್ತಾರೆ. ಮತ್ತು ಇಂತಹ ರೋಗಿಗಳಿಗೆ ಒಂದು ಅಥವಾ ಎರಡು ವರ್ಷಗಳ ವರೆಗೆ ದ್ರಾಕ್ಷೆಯೊಂದನ್ನೇ ತಿನ್ನಿಸುವುದು ವಿಶೇಷ ಲಾಭಕರವೆಂದು ಹೇಳಿರುವರು.

ಸಂಧಿವಾತ (ಕೀಲು ವಾಯು) ರೋಗದ ವಿಶೇಷ ಚಿಕಿತ್ಸಕರಾದ ಒಬ್ಬ ಲಂಡನ್ನಿನ ಡಾಕ್ಟರರು ತಮ್ಮ ರೋಗಿಗಳಿಗೆ ಕಿತ್ತಳೆ, ನಿಂಬೆ, ದ್ರಾಕ್ಷೆ, ಸೇವು, ಮರಸೇವು ಮುಂತಾದ ಹಣ್ಣುಗಳನ್ನು ಕೊಟ್ಟು, ಬಹಳ ಉತ್ಕೃಷ್ಟವಾದ ಪ್ರಯೋಜನವನ್ನು ಹೊಂದಿರುತ್ತಾರೆ.

ಫ್ರಾನ್ಸಿನ ಪ್ರಾಕೃತಿಕ ಚಿಕಿತ್ಸೆಯ ಒಬ್ಬ ಪ್ರಸಿದ್ಧ ಪಂಡಿತರು ‘‘ಹಣ್ಣುಗಳಲ್ಲಿ ಪೊಟಾಸಿನ ಕ್ಷಾರವು ಹೆಚ್ಚಾಗಿರುತ್ತದೆ. ರಕ್ತವನ್ನು ಶೋಧಿಸುವುದರಲ್ಲಿಯೂ, ಕೀಲುಗಳ ಬಂಧನವನ್ನು ಬಿಡಿಸುವುದರಲ್ಲಿಯೂ ಮತ್ತು ಇತರವಿಧ ವಾತರೋಗಗಳನ್ನು ಗುಣಪಡಿಸುವುದರಲ್ಲಿಯೂ ಹಣ್ಣುಗಳ ಕ್ಷಾರವು ಅದ್ವಿತೀಯವಾಗಿರುತ್ತದೆ. ಈ ಕಾರಣದಿಂದಲೇ ಮೇಲ್ಕಂಡ ರೋಗಗಳನ್ನು ಗುಣಪಡಿಸುವುದಕ್ಕೆ ಹಣ್ಣುಗಳನ್ನು ಬಿಟ್ಟರೆ ಬೇರೆ ಮತ್ತೊಂದು ಶ್ರೇಷ್ಠವಾದ ಔಷಧಿಯೇ ಇಲ್ಲ’’ ಎಂದು ಹೇಳಿರುತ್ತಾರೆ.

ಚರ್ಮರೋಗದ ವಿಶೇಷ ಚಿಕಿತ್ಸಕರಾದ ಒಬ್ಬ ಯೂರೋಪಿನ ಡಾಕ್ಟರರು ಪ್ರಾತಃಕಾಲ ಮತ್ತು ಸಾಯಂಕಾಲ ಹಣ್ಣುಗಳನ್ನು ಯಥೇಷ್ಟವಾಗಿ ತಿನ್ನುವ ಸಲಹೆಯನ್ನು ಚರ್ಮರೋಗಿಗಳಿಗೆ ಕೊಡುತ್ತಾರೆಂದು ವಿದೇಶದ ಉಚ್ಚಶಿಕ್ಷಣವನ್ನು ಪಡೆದು ಬಂದಿರುವ ಒಬ್ಬ ಸುಚಿಕಿತ್ಸಕರು ಹೇಳಿರುತ್ತಾರೆ. ಮತ್ತು ಯಕೃತ್ತಿನ (ಲೀವರ್) ದೋಷದಿಂದುಂಟಾಗುವ ತಲೆನೋವು ಮಲಬದ್ಧತೆ, ಮುಂತಾದ ರೋಗಗಳಿಗಾಗಿ ‘‘ಫ್ರೂಟ್‌ಸಾಲ್ಟ್’’ ಮುಂತಾದ ಕೃತ್ರಿಮ ಔಷಧಿಗಳನ್ನು ವ್ಯರ್ಥವಾಗಿ ಉಪಯೋಗಿಸುವ ಹುಚ್ಚನ್ನು ಬಿಟ್ಟು ಹಣ್ಣುಗಳನ್ನೇ ಸೇವಿಸಿದರೆ ಆಶ್ಚರ್ಯಜನಕವಾದ ಪ್ರಯೋಜನವುಂಟಾಗುತ್ತದೆ; ಹಣ್ಣುಗಳಿಂದ ಗುಣವಾಗದಿರತಕ್ಕ ತಲೆನೋವು ಮತ್ತು ಮಲಬದ್ಧತೆಯು ಪ್ರಪಂಚದ ಮತ್ತಾವ ಔಷಧಿಯಿಂದಲೂ ಖಂಡಿತ ಗುಣವಾಗುವುದಿಲ್ಲ. ಸ್ವಾಭಾವಿಕವಾದ ಹಣ್ಣುಗಳನ್ನು ತಿರಸ್ಕರಿಸಿ ಕೃತ್ರಿಮ ಔಷಧಿಗಳಿಗೆ ಶರಣಾಗತರಾಗುವುದು ದುಡ್ಡಿನ ಅಪವ್ಯಯವಲ್ಲದೆ ಮತ್ತೇನು ಅಲ್ಲ’’ ಎಂದು ಅನೇಕ ಪಾಶ್ಚಾತ್ಯ ಚಿಕಿತ್ಸಕರೇ ಹೇಳುತ್ತಾರೆ.

ಉಪ್ಪು ಮತ್ತು ಹುಳಿರಸದ ಹಣ್ಣುಗಳಲ್ಲಿರುವ ಸ್ವಾಭಾವಿಕ ಕ್ಷಾರವು, ಆಮ್ಲವಸ್ತುಗಳಿಂದ ತಯಾರಿಸಲ್ಪಡುವ ಕೃತ್ರಿಮ ಔಷಧಿಗಳಲ್ಲಿ ಸಾಕಾದಷ್ಟು ಇರುವುದಿಲ್ಲ. ಈ ಕೃತ್ರಿಮ ಔಷಧಿಗಳು ಹಣ್ಣುಗಳ ಸ್ವಾಭಾವಿಕ ಗುಣವನ್ನು ಎಂದಿಗೂ ಹೊಂದಲಾರವು. ವಿಜ್ಞಾನಶಾಸ್ತ್ರ ಪಂಡಿತರು ಹಣ್ಣುಗಳ ತತ್ವವನ್ನು ತೆಗೆದಿಡಬಲ್ಲರೇ ಹೊರತು ನಿಜವಾದ ಹಣ್ಣುಗಳನ್ನು ಮಾಡಲು ಸಮರ್ಥರಲ್ಲವೆಂಬುದು ಖಂಡಿತ. ನಿಜವಾದ

ಹಣ್ಣುಗಳಲ್ಲಿ ಯಾವ ದೃಢವಾದ ನಂಬಿಗೆಯು ಜನಗಳಿಗೆ ಇರುವುದೋ ಆ ನಂಬಿಗೆಯು ಈ ಕೃತ್ರಿಮಗಳಾದ ಔಷಧಿಗಳ ವಿಷಯದಲ್ಲಿ ಉಂಟಾಗುವುದು ಅಸಂಭವದ ಮಾತಾಗಿದೆ.

ಹಣ್ಣು ಮನುಷ್ಯರ ಪ್ರಾಣರಕ್ಷಣೆಗಾಗಿ ಪರಮೇಶ್ವರನಿಂದ ಕೊಡಲ್ಪಟ್ಟ ಸ್ವಾಭಾವಿಕ ಭೋಜನವಾಗಿದೆ. ದಯಾಮಯನಾದ ಈಶ್ವರನು ಶರೀರವನ್ನು ನಿರ್ಮಿಸಿ ಅದರ ರಕ್ಷಣೆಗಾಗಿ ಹಣ್ಣುಗಳನ್ನೂ ನಿರ್ಮಿಸಿರುವನು. ಆದುದರಿಂದ ಶರೀರಪೋಷಣೆಗಾಗಿ ಹಣ್ಣುಗಳಲ್ಲಿರುವ ಪೋಷಕ ತತ್ವವು ಮತ್ತಾವ ಕೃತ್ರಿಮ ಆಹಾರದಲ್ಲಿಯೂ ಇರುವುದಿಲ್ಲ. ಮನುಷ್ಯನಲ್ಲಿ ನಿಜವಾದ ಶಕ್ತಿಯನ್ನುಂಟುಮಾಡುವುದರಲ್ಲಿ ಹಣ್ಣನ್ನುಬಿಟ್ಟರೆ ಮತ್ತಾವ ಪದಾರ್ಥವೂ ಇಲ್ಲ. ಪ್ರಾಕೃತಿಕ ಜೀವನದ ಮರ್ಮವನ್ನು ಅರಿತಿರುವ ಜನಗಳು ಮೇಧಾವಿಗಳಾಗಬೇಕಾದರೆ, ದೀರ್ಘಜೀವಿಗಳಾಗಬೇಕಾದರೆ, ಪಶುಗಳಂತೆ ಮಾಂಸಾಹಾರ ಅಥವಾ ಅಪ್ರಾಕೃತಿಕ ಪದಾರ್ಥಗಳನ್ನು ಸೇವಿಸುವ ಅಭ್ಯಾಸವನ್ನು ಬಿಟ್ಟು ಆಯಾಯ ಕಾಲದಲ್ಲಿ ಬರುವ ಉತ್ತಮವಾದ ಹಣ್ಣುಗಳನ್ನು ಅವುಗಳ ಗುಣದೋಷಗಳ ವಿವೇಚನೆಯಿಂದ ಸೇವಿಸುತ್ತ ಶರೀರ ಇಂದ್ರಿಯಗಳಲ್ಲಿ ಅಧಿಕವಾದ ಶಕ್ತಿಯನ್ನುಸಂಪಾದಿಸಿ ಧೀರ್ಘಜೀವಿಗಳಾಗಬೇಕಾದುದು ಮುಖ್ಯವಾಗಿರುತ್ತದೆ

---

**ಮಾವಿನಹಣ್ಣು**:—ಸಿಹಿ,ಪುಷ್ಟಿಕರ, ರುಚಿಕರ, ವಾಯುನಾಶಕ, ಹೃದಯಕ್ಕೆ ಹಿತಕರ, ಬೇಗನೆ ಜೀರ್ಣಿಸುವುದಿಲ್ಲ. ಮಲವನ್ನು ತಡೆಯುವುದು, ಪ್ರಮೇಹ ನಾಶಕ, ಶರೀರದ ವರ್ಣವನ್ನು ಉತ್ತಮಗೊಳಿಸುವುದಲ್ಲದೆ ವ್ರಣ - ಕಫ - ರಕ್ತವಿಕಾರಗಳನ್ನು ದೂರಮಾಡುವುದು, ಚಾಕಿನಿಂದ ಹೆಚ್ಚದೆ ಹಾಗೆಯೇ ಬಾಯಿಂದಲೇ ರಸವನ್ನು ಹೀರಿ ಸೇವಿಸಲ್ಪಟ್ಟ ಹಣ್ಣು ಹಗುರವೂ, ವೀರ್ಯವರ್ಧಕವೂ, ಶೀತಲವೂ, ವಾತಪಿತ್ತನಾಶಕವೂ, ಮಲವನ್ನು ತಡೆಯದಿರುವುದೂ, ಆಗಿರುತ್ತದೆ. ಚಾಕಿನಿಂದ ಹೆಚ್ಚಿ ಸೇವಿಸಲ್ಪಟ್ಟ ಹಣ್ಣು ಬೇಗ ಜೀರ್ಣವಾಗುವುದಿಲ್ಲ, ಮತ್ತು ಧಾತುಪುಷ್ಟಿಯನ್ನೂ, ಬಲವರ್ಧನವನ್ನೂ ಮಾಡಿ ವಾಯುವನ್ನು ಶಾಂತಗೊಳಿಸುತ್ತದೆ. ಹಣ್ಣಿನ ರಸವು ಬಲದಾಯಕ, ವಾತನಾಶಕ, ಭೇದಿಕರ, ಕಫವರ್ಧಕ ಮತ್ತು ವಿಶೇಷ ಪುಷ್ಟಿಕರವಾಗಿರು

ವುದಾದರೂ ಹೃದಯಕ್ಕೆ ಅತ್ಯಂತ ಹಿತಕರವಾಗಿರುವುದಿಲ್ಲ. ಹಾಲಿನೊಡನೆ ಸೇವಿಸಲ್ಪಟ್ಟ ಹಣ್ಣು ವಾತಪಿತ್ತನಾಶಕ, ರುಚಿಕರ, ಪುಷ್ಟಿಕರ ಮತ್ತು ಬಲವೀರ್ಯಗಳನ್ನು ವೃದ್ಧಿಗೊಳಿಸುವುದಾಗಿದೆ, ಸಾಪಕಾತದಿಂದ ಪಚನವಾಗುತ್ತದೆ. ಹಣ್ಣಿನ ರಸವನ್ನು ಜೇನುತುಪ್ಪದೊಡನೆ ಸೇವಿಸುವುದು ಧಾತುಗತ(ಒಳ)ಜ್ವರದವರಿಗೆ ಹಿತಕರವಾಗಿದೆ. ಮಾವಿನ ಹಣ್ಣುಗಳನ್ನು ವಿಶೇಷವಾಗಿ ತಿನ್ನುವುದರಿಂದ ಮಂದಾಗ್ನಿ-ವಿಷಮಜ್ವರ ರಕ್ತವಿಕಾರ-ಅಜೀರ್ಣ ಮತ್ತು ನೇತ್ರರೋಗ ಮುಂತಾದ ಉಪದ್ರವಗಳುಂಟಾಗುವುವು. ಮೇಲಿನ ಗುಣಗಳು ಗಿಡದಲ್ಲಿಯೇ ಪಕ್ವವಾದ ಹಣ್ಣುಗಳಲ್ಲಿ ಅಧಿಕ ಪ್ರಮಾಣದಿಂದಿರುವುವು. ಹೆಚ್ಚಾಗಿ ಹಣ್ಣುಗಳನ್ನು ತಿನ್ನುವುದರಿಂದ ತೊಂದರೆಯುಂಟಾದಾಗ ಶುಂಠಿಯ ಕಷಾಯವನ್ನಾಗಲಿ,ಶುಂಠಿಯ ಚೂರ್ಣವನ್ನು ಹಾಲಿನೊಡನೆಯಾಗಲಿ ಸೇವಿಸುವುದು ಹಿತಕರವಾಗಿರುತ್ತದೆ. ಎಳೆಯದಾಗಿರುವ ಮಾವಿನಕಾಯಿಯು ಒಗರು ಮತ್ತು ಹುಳಿಯಿಂದ ಕೂಡಿದ್ದು, ರುಚಿಕರ ಮತ್ತು ಪಿತ್ತವನ್ನುಂಟು ಮಾಡುವುದಾಗಿದೆ. ಬಲಿತಿರುವಕಾಯಿಯು ಹುಳಿಯಾಗಿದ್ದು, ತ್ರಿದೋಷಗಳನ್ನುಂಟುಮಾಡಿ ರಕ್ತವನ್ನು ಕೆಡಿಸಿ ಶರೀರವನ್ನು ಒಣಗಿಸುತ್ತದೆ. ಮಾವಿನ ಹಣ್ಣುಗಳೊಳಗೆ ಕಸಿಗಿಡದ ಹಣ್ಣುಗಳೇ ಸರ್ವೋತ್ತಮವಾಗಿಯೂ, ರುಚಿಕರವಾಗಿಯೂ ಇರುತ್ತವೆ.

ಮಾವಿನಹಣ್ಣು ಎಲ್ಲಾ ಹಣ್ಣುಗಳ ಮಧ್ಯದಲ್ಲಿ ರಾಜನಂತಿರುವುದಕ್ಕೆ ಅದರ ಮಧುರತೆಯೇ ಕಾರಣವಾಗಿದೆ. ಇದನ್ನುವರ್ಣಿಸದಿರತಕ್ಕ ಕವಿಯೇ ಇಲ್ಲ. ಇದರ ಪಲ್ಲವವು ಭಾವುಕರಾದ ಕವಿಗಳ ಭಾವವನ್ನು ಭವ್ಯಗೊಳಿಸುವುದಾಗಿದೆ. ಇದರ ಎಲೆ, ಹೂವು, ಕಾಯಿ, ಬೀಜ, ತೊಗಟೆ, ಬೇರು ಮುಂತಾದ ಸಕಲ ಅವಯವಗಳೂ ಔಷಧಿಗೆ ಉಪಯುಕ್ತಗಳಾಗುತ್ತವೆ. ಮಾವಿನ ಹಣ್ಣಿನಲ್ಲಿ, ಗೈಲಿಕ್ ಏಸಿಡ್, ಸಾಇಟ್ರಿಕ್ ಏಸಿಡ್, ಟಾರ್ಟರಿಕ್ ಏಸಿಡ್, ಮಲಿಕ್ ಏಸಿಡ್, ಇಷ್ಟು ಏಸಿಡ್ಡುಗಳು ಸಿಗುತ್ತವೆ.

೧. ಮಾವಿನ ವಾಟೆಯೊಳಗಿನ ಬೀಜ ೧ ತೊಲ, ಬಿಲ್ವಫಲದ ಒಳಗಿನ ತಿರುಳು ೧ ತೊಲ, ಇವೆರಡನ್ನೂ ಜಜ್ಜಿ ಅರ್ಧಸೇರು ನೀರಿನಲ್ಲಿ ಹಾಕಿ ಕುದಿಸಿ, ಒಂದು ಚಟಾಕು ನೀರು ಉಳಿದನಂತರ ಇಳಿಸಿ ಕಿವಿಚಿ ಶೋಧಿಸಿಕೊಂಡು, ಅರ್ಧತೊಲ ಜೇನುತುಪ್ಪ ಮತ್ತು ಕಾಲುತೊಲ

ಸಕ್ಕರೆಯನ್ನು ಹಾಕಿ ಕುಡಿಯಬೇಕು. ಇದರಿಂದ ವಾಂತಿ ಮತ್ತು ಭೇದಿಯು ನಿಂತುಹೋಗುತ್ತದೆ.

೩. ಮಾವಿನ ಮರದ ಒಳಗಿನ ಚಕ್ಕೆಯನ್ನು ತೆಳ್ಳಗಿರುವ ಮೊಸರಿನಲ್ಲಿ ಅರೆದು ಕುಡಿಸಿದರೆ ಭೇದಿಯು ನಿಂತುಹೋಗುತ್ತದೆ.

೪. ಹಳೆಯ ವಾಟೆಯೊಳಗಿನ ಬೀಜ, ಬಿಲ್ವದ ತಿರುಳು, ಲೋಧ್ರದ ಚಕ್ಕೆ, ಕೊತ್ತುಂಬರಿ ಬೀಜ, ಇವುಗಳನ್ನು ಸಮಭಾಗವಾಗಿ ತಂದು ಚೂರ್ಣಿಸಿ, ಚೂರ್ಣದಷ್ಟು ಸಕ್ಕರೆಯನ್ನು ಕೂಡಿಸಿ ಇಟ್ಟು ಕೊಳ್ಳಬೇಕು. ಈ ಚೂರ್ಣವನ್ನು ಕಾಲುಕಾಲು ತೊಲದಂತೆ ದಿನಕ್ಕೆ ರಡು ಸಲ ಮೊಸರಿನಲ್ಲಿ ಕೂಡಿಸಿ ಸೇವಿಸುವುದರಿಂದ ಗರ್ಭಿಣಿಯರ ಅತಿಸಾರವು ನಿಂತುಹೋಗುತ್ತದೆ.

೫. ಮಾವಿನ ಮರದ ಒಳಚಕ್ಕೆಯನ್ನು ಮೊಸರಿನಲ್ಲಿ ಅರೆದು ಹೊಕ್ಕಳದ ಸುತ್ತಲೂ ಲೇಪಿಸುವುದರಿಂದ ಭೇದಿಯು ನಿಲ್ಲುತ್ತದೆ.

೬. ಮಾವಿನ ಮರದ ಒಳಚಕ್ಕೆ, ಶುಂಠಿ, ಮೆಣಸು, ಹಿಪ್ಪಲಿ ಕೊಡಸಿಗೆ ಚಕ್ಕೆ, ಇವುಗಳನ್ನು ಸಮವಾಗಿ ಅರೆದು ಅಕ್ಕಿ ತೊಳೆದ ನೀರಿನೊಡನೆ ಸೇವಿಸುವುದರಿಂದ ಸಂಗ್ರಹಣಿ, ಕಾಮಾಲೆ, ಪ್ರಮೇಹ, ಅರುಚಿ, ಅತಿಸಾರ, ಹೊಟ್ಟೆಯಲ್ಲಿನ ಗಡ್ಡೆ, ಜ್ವರ, ಇವುಗಳು ಶಾಂತವಾಗುತ್ತವೆ.

೭. ಮಾವಿನ ವಾಟೆಯೊಳಗಿನ ಬೀಜ, ಶುಂಠಿ, ಅತಿಬಜೆ, ಕೊಡಸಿಗೆ ಚಕ್ಕೆ ಇವುಗಳನ್ನು ಸಮವಾಗಿ ತಂದು ಕುಟ್ಟಿ, ಮಾವಿನ ಎಲೆಗಳ ರಸದಲ್ಲಿ ೩೬ ಗಂಟೆಗಳ ವರೆಗೆ ಅರೆದು ಒಣಗಿಸಿ ಸೀಸೆಯಲ್ಲಿ ಟ್ಟುಕೊಳ್ಳಬೇಕು. ಈ ಚೂರ್ಣವನ್ನು ಕಾಲುತೊಲದಿಂದ ಅರ್ಧ ತೊಲದ ವರೆಗೆ ಪ್ರಾತಃಕಾಲ ಸಾಯಂಕಾಲಗಳಲ್ಲಿ ಸಕ್ಕರೆಯೊಡನೆ ಸೇವಿಸಿದರೆ ಪಿತ್ತದ ಆಧಿಕ್ಯದಿಂದುಂಟಾದ ಸಂಗ್ರಹಣಿ, ಜ್ವರದೊಡನೆ ಬಂದಿರುವ ಭೇದಿ, ರಕ್ತದ ಭೇದಿ ಮುಂತಾದುವುಗಳು ಗುಣವಾಗು ತ್ತವೆ.

೮. ಮಾವಿನ ವಾಟೆಯೊಳಗಿನಬೀಜ ಮತ್ತು ಬಿಲ್ವದತಿರುಳು ಇವೆರಡನ್ನೂಒಂದೊಂದು ತೊಲ ಸಂಗ್ರಹಿಸಿ ಒಂದು ಸೇರು ನೀರಿನಲ್ಲಿ

ಹಾಕಿ ಕುದಿಸಬೇಕು. ಅರ್ಧ ನೀರು ಉಳಿದ ನಂತರ ಕಿವಿಚಿ ಶೋಧಿಸಿ ಕೊಂಡು ಅದರಲ್ಲಿ ೧ ತೊಲ ಕಲ್ಲುಸಕ್ಕರೆ ಮತ್ತು ೧ ತೊಲ ಜೇನು ತುಪ್ಪವನ್ನು ಕೂಡಿಸಿ ಕುಡಿಯುವುದರಿಂದ ವಾಂತಿ ಮತ್ತು ಅತಿಸಾರವು ಹೆಸರಿಲ್ಲದೆ ಮಾಯವಾಗುತ್ತದೆ.

೮. ಮಾವಿನ ವಾಟೆಯೊಳಗಿನ ಬೀಜವನ್ನು ಗೋಮೂತ್ರ ಮತ್ತು ಸೈಂಧವಲವಣದೊಡನೆ ಅರೆದು ಹಚ್ಚುತ್ತಿದ್ದರೆ, ಕೃಮಿಗಳಿಂದ ಆಕ್ರಮಿಸಲ್ಪಟ್ಟು ನವೆಯಾಗುತ್ತ ಕೂದಲು ಉದುರಿಹೋಗಿರುವ ಭಾಗದಲ್ಲಿನ ಕೃಮಿಗಳು ನಾಶವಾಗಿ ಕೂದಲು ಹುಟ್ಟುತ್ತದೆ.

೯. ಮಾವಿನ ಎಳೆಯ ಹೀಚುಗಳನ್ನು ಅರೆದು ಕಣ್ಣುಗಳ ಮೇಲೆ ಕಟ್ಟುವುದರಿಂದ ಕಣ್ಣುನೋವು ಶಾಂತವಾಗುತ್ತದೆ.

೧೦. ಮಾವಿನ ಎಲೆ,ನೇರಳೆಯ ಎಲೆ,ಜಡೆಹತ್ತಿ ಗಿಡದ ಕಾಯಿ, ಬೇಲದ ತಿರುಳು, ಇವುಗಳನ್ನು ಸಮವಾಗಿ ಸಂಗ್ರಹಿಸಿ ಕುಟ್ಟಿ ಅರೆದು ರಸವನ್ನು ತೆಗೆದು ಸ್ವಲ್ಪ ಶುದ್ಧವಾದ ಜೇನುತುಪ್ಪವನ್ನು ಕೂಡಿಸಿ ಕಿವಿಗಳಿಗೆ ಹಾಕುವುದರಿಂದ ಕಿವಿ ಸೋರುವುದು,ಕಿವಿಯಲ್ಲಿ ಕೃಮಿಗಳು ಸೇರಿರುವುದು, ಮುಂತಾದ ಉಪದ್ರವಗಳು ಶಾಂತವಾಗುತ್ತವೆ.

೧೧. ಮಾವಿನ ಎಲೆ, ನೇರಳೆಯ ಎಲೆ, ಇಪ್ಪೆಯ ಎಲೆ, ಆಲದ ಸಣ್ಣಸಣ್ಣ ಎಲೆ, ಇವುಗಳನ್ನು ಸಮವಾಗಿ ತಂದು ಅರೆದು ಉಂಡೆಯ ನ್ನುಮಾಡಿರಿ, ಈ ಉಂಡೆಯ ನಾಲ್ಕರಷ್ಟು ಶುದ್ಧವಾದ ಎಳ್ಳೆಣ್ಣೆ, ಎಣ್ಣೆಯ ನಾಲ್ಕರಷ್ಟು ನೀರು, ಇವುಗಳನ್ನು ಒಂದು ಕಲಾಯಿಯ ಪಾತ್ರೆಯಲ್ಲಿ ಹಾಕಿ ಮೇಲಿನ ಉಂಡೆಯನ್ನು ಹಾಕಿ ಮಂದಾಗ್ನಿ ಯಿಂದ ಕುದಿಸಿರಿ, ನೀರು ಇಂಗಿದ ನಂತರ ಇಳಿಸಿ ಶೋಧಿಸಿ ಕೊಂಡು ಸೀಸೆಯಲ್ಲಿಟ್ಟುಕೊಳ್ಳಿ. ಈ ಎಣ್ಣೆಯನ್ನು ಕಿವಿಗಳಿಗೆ ಹಾಕಿ ದರೆ, ಕಿವಿಯಿಂದ ಕೀವು ಸೋರುವುದು ನಿಂತುಹೋಗುತ್ತದೆ.

೧೨. ಮಾವಿನ ವಾಟೆಯ ಬೀಜ, ಮತ್ತು ಬಿಲ್ವದ ತಿರುಳು ಇವೆರಡನ್ನೂ ಒಂದೊಂದು ತೊಲ ತಂದು ಒಂದು ಸೇರು ನೀರಿನಲ್ಲಿ ಕುದಿಸಿ ಅರ್ಧ ನೀರು ಉಳಿದನಂತರ ಶೋಧಿಸಿಕೊಂಡು ೧ ತೊಲ ಕಲ್ಲುಸಕ್ಕರೆ, ೧ ತೊಲ ಜೇನುತುಪ್ಪ, ಇವುಗಳನ್ನು ಸೇರಿಸಿ ಕುಡಿಯು

ವುದರಿಂದ ವಾಂತಿ ಮತ್ತು ಭೇದಿಯು ಖಂಡಿತವಾಗಿ ಬೇಗನೆ ಶಾಂತವಾಗುತ್ತದೆ.

೧೩. ಮಾವಿನ ಎಲೆ, ಬೂರುಗದ ಎಲೆ, ನೆಲ್ಲಿಯಎಲೆ, ಈ ಮೂರನ್ನೂ ನೀರನ್ನು ಹಾಕದೆ ಬೇರೆಬೇರೆ ಕುಟ್ಟಿ ರಸವನ್ನು ಹಿಂಡಿಕೊಳ್ಳಬೇಕು. ಇವುಗಳಲ್ಲಿನ ಕಾಲು ಕಾಲು ತೊಲ ರಸವನ್ನು ತೆಗೆದುಕೊಂಡು ಅರ್ಧ ತೊಲ ಜೇನುತುಪ್ಪವನ್ನು ಸೇರಿಸಿ ಸೇವಿಸಿದರೆ ಸಕಲ ವಿಧ ಅತಿಸಾರವೂ ನಿಂತುಹೋಗುತ್ತದೆ.

೧೪. ಮಾವಿನ ವಾಟೆಯೊಳಗಿನ ಬೀಜದ ರಸವನ್ನು ಮೂಗಿಗೆ ಹಾಕುವುದರಿಂದ ಅಥವಾ ನಶ್ಯದಂತೆ ಏರಿಸುವುದರಿಂದ ಮೂಗಿನಲ್ಲಿ ರಕ್ತ ಬೀಳುವುದು ನಿಲ್ಲುತ್ತದೆ.

೧೫. ಮಾವಿನ ಚಕ್ಕೆ ೧ ತೊಲ, ನೆಲ್ಲಿಚೆಟ್ಟು ೧ ತೊಲ, ಇವೆರಡನ್ನೂ ಮೊಸರಿನಲ್ಲಿ ಗಂಧದಂತೆ ಅರೆದು ಹೊಕ್ಕಳದ ಸುತ್ತಲೂ ಹಚ್ಚುವುದರಿಂದ ಮಕ್ಕಳ ಭೇದಿಯು ನಿಂತು ಹೋಗುತ್ತದೆ.

೧೬. ಆಮಚೂರು (ಮಾವಿನ ಕಾಯನ್ನು ಕೊಯ್ದು ಒಣಗಿಸಿಟ್ಟಿರುವುದು) ಮತ್ತು ಬೆಳ್ಳುಳ್ಳಿಯನ್ನು ನೀರಿನೊಡನೆ ಅರೆದು ಲೇಪಿಸಿದರೆ ಚೇಳಿನ ವಿಷವು ಇಳಿದುಹೋಗುತ್ತದೆ ಅಥವಾ ಇಪ್ಪೆಯ ಹೂವನ್ನು ಅರೆದು ಹಚ್ಚಿದರೂ ಚೇಳಿನ ವಿಷವು ಖಂಡಿತವಾಗಿ ಇಳಿಯುತ್ತದೆ. ಇಪ್ಪೆಯ ಹೂವಿನ ಕಾಲದಲ್ಲಿ ಸಂಗ್ರಹಿಸಿ ಒಣಗಿಸಿ ಕುಟ್ಟಿ ಸೀಸೆಯಲ್ಲಿಟ್ಟುಕೊಂಡಿದ್ದು ಸಮಯದಲ್ಲಿ ಉಪಯೋಗಿಸಬಹುದು. ಅಥವಾ ಮುಳ್ಳುಜಾಲಿಯ ಸೊಪ್ಪನ್ನು ಅರೆದು ಸಣ್ಣ ಎಲಚಿಯ ಕಾಯಿಯಷ್ಟನ್ನು ತಿನ್ನಿಸುವುದರಿಂದ ಚೇಳಿನ ವಿಷವು ಕೂಡಲೇ ಇಳಿದು ಉರಿ ಚಳುಕುಗಳು ನಿಂತುಹೋಗುತ್ತವೆ. ಸೊಪ್ಪನ್ನು ತಂದು ಒಣಗಿಸಿ ಚೂರ್ಣಮಾಡಿ ಇಟ್ಟುಕೊಂಡಿದ್ದೂ ಉಪಯೋಗಿಸಬಹುದು ಈ ೨ ಪ್ರಯೋಗಗಳನ್ನೂ ಬೆಂಗಳೂರಿನ ನನ್ನ ಒಬ್ಬ ವೈದ್ಯ ಮಿತ್ರರು ೧೦-೧೫ ಸಲ ಪರೀಕ್ಷಿಸಿರುತ್ತಾರೆ.

೧೭. ಒಂದು ಸಲಕ್ಕೆ ಕಾಲು ತೊಲದಂತೆ ಮಾವಿನ ಹೂವನ್ನು ಅರೆದು ತಂಗಳ ನೀರಿನಲ್ಲಿ ಕಲಸಿ ಕುಡಿಸುವುದರಿಂದ ಸಂಗ್ರಹಣಿ ಮತ್ತು ಅತಿಸಾರವು ನಿಲ್ಲುತ್ತದೆ.

೧೮. ಮಾವಿನ ಮರದ ಒಳಗಿನ ಚಕ್ಕೆಯ ಎರಡು ತೊಲ ರಸದಲ್ಲಿ ಹನ್ನೆರಡು ಗುರುಗಂಜಿಗಳ ತೂಕ ಶೋಧಿಸಿದ ಹೊಸ ಸುಣ್ಣವನ್ನು ಹಾಕಬೇಕು, ಒಂದು ಗಾಜಿನ ಲೋಟದಲ್ಲಿ ಒಂದು ಪಾವು ನೊರೆ ಹಾಲನ್ನು ತೆಗೆದುಕೊಂಡು ಆ ಹಾಲಿನಲ್ಲಿ ಮೇಲಿನ ರಸ ಸುಣ್ಣಗಳನ್ನು ಕೂಡಿಸಿ ಕೂಡಲೇ ಕುಡಿದುಬಿಡಬೇಕು. ತಡಮಾಡಕೂಡದು. ಇದರ ಸೇವನೆಯಿಂದ ಎಷ್ಟೋ ವರ್ಷಗಳ ಹಳೆಯ ಮೇಹಜಾಡ್ಯವು (ಮೂತ್ರದ್ವಾರದೊಳಗಿನ ವ್ರಣವು) ೭ ದಿನಗಳೊಳಗೆ ಖಂಡಿತವಾಗಿ ಗುಣವಾಗುತ್ತದೆ.

೧೯. ಮಾವಿನ ವಾಟೆಯೊಳಗಿನ ಬೀಜ ೫ ತೊಲ ಮತ್ತು ಚಂಡುಹೂವಿನ ರೇಕುಗಳು ೧೫ ತೊಲ, ಇವೆರಡನ್ನೂ ಕತ್ತರಿಸಿ ಒಂದು ಸೇರು ಶುದ್ಧವಾದ ಎಳ್ಳೆಣ್ಣೆಯಲ್ಲಿ ಹಾಕಿ ಕಾಯಿಸಬೇಕು. ಹೂವಿನ ರೇಕುಗಳು ಕರಗಿ ಹೋದನಂತರ ಇಳಿಸಿ ಒಂದು ಬೇರೆ ಪಾತ್ರೆಯಲ್ಲಿ ಹೂವು ಸಹಿತವಾಗಿಯೇ ಎಣ್ಣೆಯನ್ನು ತುಂಬಿ ಬಾಯಿಯನ್ನು ಭದ್ರ ಪಡಿಸಿ ಒಂದು ತಿಂಗಳ ವರೆಗೆ ಭೂಮಿಯಲ್ಲಿ ಹೂಳಿಟ್ಟಿದ್ದು ಅನಂತರ ತೆಗೆದು ಕೂದಲಿಗೆ ಹಚ್ಚುವುದರಿಂದ ಕೂದಲು ಕಪ್ಪಾಗುತ್ತದೆ.

೨೦. ಮಾವಿನ ವಾಟೆಯೊಳಗಿನ ಬೀಜ ೫ ತೊಲ, ನೆಲ್ಲಿಕಾಯಿ ಅಥವಾ ಒಣಗಿದ ನೆಲ್ಲಿಚಟ್ಟು ೨ ತೊಲ ಅಳಲೆಕಾಯಿ, ೨ ತೊಲ, ತಾರೆ ಕಾಯಿ ೧ ತೊಲ, ಕಬ್ಬಿಣದ ನುಣ್ಣಗಿರುವ ಪುಡಿ ೧ ತೊಲ, ಇವುಗಳನ್ನು ಕುಟ್ಟಿ ಕಬ್ಬಿಣದ ಬಾಣಲಿ ಅಥವಾ ಕಬ್ಬಿಣದ ಇನ್ನಾವ ಪಾತ್ರೆಯಲ್ಲಾಗಲಿ ಹಾಕಿ ನೀರನ್ನು ಹಾಕಿಕೊಂಡು ಕಬ್ಬಿಣದ ಗಡಾರಿಯಿಂದ ಚನ್ನಾಗಿ ತಿಕ್ಕಿ ಅರೆಯಬೇಕು. ಇದನ್ನು ರಾತ್ರಿಯಲ್ಲಿ ಆ ಕಬ್ಬಿಣದ ಪಾತ್ರೆಯಲ್ಲಿಯೇ ಬಿಟ್ಟಿದ್ದು ಮರುದಿನ ಇದನ್ನು ಕೆಲವು ದಿನಗಳ ವರೆಗೆ ಹಚ್ಚುವುದರಿಂದ ಅಕಾಲದಲ್ಲಿಯೇ ಬಂದಿರುವ ಬಿಳಿಯ ಕೂದಲು ಕಪ್ಪಾಗುತ್ತದೆ.

೨೧. ಸುಪಕ್ವವಾಗಿರುವ ಮಾವಿನ ಹಣ್ಣಿನ ರಸ ಅಳತೆ ೪ ಸೇರು, ಕಲ್ಲುಸಕ್ಕರೆ ೨ ಪೌಂಡು, ತುಪ್ಪ ೨೦ ತೊಲ, ತುಂಠಿಯ ಚೂರ್ಣ ೧೦ ತೊಲ, ಮೆಣಸಿನ ಚೂರ್ಣ ೫ ತೊಲ, ಹಿಪ್ಪಲಿಯ ಚೂರ್ಣ ೨॥

ತೊಲ, ನೀರು ಅಳತೆ ೧ ಸೇರು, ಇವೆಲ್ಲವನ್ನೂ ಕಲಾಯಿಯ ಪಾತ್ರೆಯಲ್ಲಿ ಹಾಕಿ ಮಂದಾಗ್ನಿಯಿಂದ ಕಾಯಿಸಬೇಕು. ತಿರುಗಿಸುವುದಕ್ಕೆ ಮಾವಿನ ಕಡ್ಡಿಯನ್ನೇ ಉಪಯೋಗಿಸಬೇಕು. ಈ ರಸವು ಗಟ್ಟಿಯಾದನಂತರ ಕೆಳಗಿಳಿಸಿ ಈ ಕೆಳಗೆ ಕಾಣಿಸಿರುವ ಚೂರ್ಣವನ್ನು ಹಾಕಬೇಕು.

ಧನಿಯ, ಬಿಳಿಯ ಜೀರಿಗೆ,ಚಿತ್ರಮೂಲ, ಲವಂಗಪತ್ರೆ, ನಾಗಕೇಸರ, ದಾಲಚೀನಿ, ಕರಿಯ ಜೀರಿಗೆ, (ಸ್ಯಾಹಜೀರಾ) ಮೋಡಿ, ಶುಂಗೆಗಡ್ಡೆ, ಏಲಕ್ಕಿ, ಲವಂಗ, ಜಾಪತ್ರೆ, ಇವುಗಳ ಚೂರ್ಣ ಒಂದೊಂದು ತೊಲದಂತೆ ಮೇಲಿನ ಪಾಕದಲ್ಲಿ ಕೂಡಿಸಬೇಕು. ಸಂಪೂರ್ಣ ತಣ್ಣಗಾದಮೇಲೆ ೧೦ ತೊಲ ಜೇನುತುಪ್ಪವನ್ನು ಕೂಡಿಸಬೇಕು. ಈ "ಆಮ್ರಪಾಕವು" ಅತ್ಯಂತ ವೀರ್ಯವರ್ಧಕವಾಗಿರುತ್ತದೆ. ಮತ್ತು ಗೃಹಸ್ಥರಿಗೆ ಸಾಂಸಾರಿಕ ಸುಖವನ್ನು ಹೆಚ್ಚಿಸುವುದರಲ್ಲಿ ಅದ್ವಿತೀಯವಾಗಿರುತ್ತದೆ. ಇಷ್ಟಲ್ಲದೆ ಸಂಗ್ರಹಣಿ, ಕ್ಷಯ, ದಮ್ಮು, ಅರೋಚಕ, ಕಾಮಾಲೆ, ಪಿತ್ತವಿಕಾರ,ರಕ್ತವಿಕಾರ ಮುಂತಾದ ಅನೇಕ ರೋಗಗಳನ್ನು ನಾಶಗೊಳಿಸತಕ್ಕುದಾಗಿದೆ. ವೀರ್ಯದ ಕ್ಷೀಣತೆಯಿಂದ ಪುಂಸತ್ವವನ್ನು ಕಳೆದುಕೊಂಡಿರತಕ್ಕವರಿಗೆ ಈ ಪಾಕವು ಸಂಜೀವನದಂತಿದೆ. ಇಂತಹ ಜನಗಳು ಮಾವಿನ ಹಣ್ಣಿನ ಸುಗ್ಗಿಯಲ್ಲಿ ಈ ಪಾಕವನ್ನು ಮಾಡಿ ಇಟ್ಟುಕೊಂಡು ಆನಂದವನ್ನು ಅನುಭವಿಸಬಹುದು. ಸ್ತ್ರೀ ಪುರುಷರು, ಬಾಲಕರು, ಮುದುಕರು, ಎಲ್ಲರೂ ಇದನ್ನು ಸೇವಿಸಬಹುದು ಇದರಿಂದ ಶರೀರವು ಬಹಳ ದೃಢವಾಗಿ ಬಲ ವರ್ಣಗಳು ಬಲವಾಗುತ್ತವೆ. ಅನೇಕರಿಂದ ಪರೀಕ್ಷಿಸಲ್ಪಟ್ಟಿದೆ.

---

ಸೇವುಹಣ್ಣು :—ಪಾಕದಲ್ಲಿಯೂ ರಸದಲ್ಲಿಯೂ ಸಿಹಿಯಾಗಿರುವುದು, ವಾತ ಪಿತ್ತನಾಶಕ, ಪುಷ್ಟಿಕಾರಕ, ವೀರ್ಯವರ್ಧಕ, ಶ್ಲೇಷ್ಮಕಾರಕ, ಶೀತಲ, ರುಚಿಕರ, ಸ್ಮರಣಶಕ್ತಿವರ್ಧಕ, ಉನ್ಮಾದನಾಶಕ ಮತ್ತು ತಲೇನೋವು-ಉನ್ಮಾದ-ಮೂತ್ರದ ಹರಳು ಈ ರೋಗಗಳಲ್ಲಿ ವಿಶೇಷ ಗುಣಕಾರಿಯಾಗಿರುವುದಲ್ಲದೆ, ಮೂತ್ರಾಶಯವನ್ನು ನಿರ್ಮಲಗೊಳಿಸುವುದು ಮತ್ತು ಹೃದಯಕ್ಕೆ ಅತ್ಯಂತ ಹಿತಕಾರಿಯಾಗಿರುತ್ತದೆ, ಬೇಗನೆ ಪಚನವಾಗುವುದಿಲ್ಲ.

ಆಧುನಿಕ ವಿಜ್ಞಾನದ ಪ್ರಗತಿಯಿಂದ ಅನೇಕವಿಧ ಶಕ್ತಿ ವರ್ಧಕ ಔಷಧಗಳು ಹೊರಹೊರಟಿವೆ. ಅವುಗಳಲ್ಲೆಲ್ಲಾ ''ಫಾಸ್ ಫರಸ್'' ಎಂಬುದೇ ತುಂಬಿಕೊಂಡಿದೆ. ನರಗಳಿಗೂ ಮೆದಳಿಗೂ ಫಾಸ್‌ಫರಸ್ ಸರ್ವಶ್ರೇಷ್ಠವಾದ ಆಹಾರವಾಗಿರುತ್ತದೆ. ದೊಡ್ಡ ದೊಡ್ಡ ಡಾಕ್ಟರುಗಳು ಈ ಫಾಸ್‌ಫರಸ್ಸಿನ ಗುಣಗಳಿಂದ ಆಕರ್ಷಿತ ರಾಗಿ ಇದಕ್ಕಿಂತಲೂ ಉತ್ತಮವಾದ ವಸ್ತುವು ಜಗತ್ತಿನಲ್ಲಿ ಮತ್ತೊಂ ದಿಲ್ಲವೆಂದು ಪ್ರಶಂಸಿಸುತ್ತಾರೆ. ಆದರೆ ಫಾಸ್‌ಫರಸ್ಸಿನ ಸಂಪರ್ಕ ದಿಂದ ಸಿದ್ಧವಾಗುವ ಔಷಧಿಗಳೆಲ್ಲವೂ ಪ್ರಾಯಃ ಬಹು ಬೆಲೆಯವು ಗಳಾಗಿರುತ್ತವೆ. ಈಗಿನ ಕಾಲದಲ್ಲಿ ನರಗಳ ದುರ್ಬಲತೆ ಮತ್ತು ಮೆದಳಿನ ದುರ್ಬಲತೆಯ ರೋಗಿಗಳು ಲೆಕ್ಕವಿಲ್ಲದಷ್ಟಿರುವರು. ನೂರರಲ್ಲಿ ಒಬ್ಬನಾದರೂ ಈ ರೋಗವಿಲ್ಲದಿರುವವನು ಸಿಗುವುದು ಅತಿ ಕಷ್ಟ. ಈ ರೋಗದ ಬಲೆಯಲ್ಲಿ ವಿಶೇಷವಾಗಿ ಶ್ರೀಮಂತರೇ ಸಿಕ್ಕುತ್ತಾರೆ ! ಇಂತಹ ಧನಿಗಳು ಈ ಬಹು ಬೆಲೆಯ ಔಷಧಗಳಿ ಗಾಗಿ ಹಣವನ್ನು ಕಣ್ಣು ಮುಚ್ಚಿ ಸುರಿಯುತ್ತಾರೆ! ಇಷ್ಟಾದರೂ ಕಡೆಗೆ ಪ್ರಯೋಜನವನ್ನು ಸಾಕಾದಷ್ಟು ಹೊಂದದೆ ವ್ಯಸನಪಡು ತ್ತಾರೆ. ಈ ಹಣವಂತರು ಹೆಚ್ಚಿನ ಬೆಲೆಯ ಔಷಧಗಳನ್ನೆಲ್ಲಾ ಬಿಟ್ಟು, ಗಟ್ಟಿ ಮನಸ್ಸಿನಿಂದ ಸೇವುಹಣ್ಣೊಂದನ್ನೇ ಕೆಲವು ದಿನಗಳ ವರೆಗೆ ಸೇವಿಸುವುದಾದರೆ ಯಥೇಷ್ಟವಾದ ಪ್ರಯೋಜನವನ್ನು ಹೊಂದಿ ರೋಗಮುಕ್ತರಾಗುತ್ತಾರೆ.

ಸೇವಿನಲ್ಲಿ ''ಫಾಸ್‌ಫರಸ್'' ತತ್ವವು ಅತ್ಯಧಿಕ ಪರಿಮಾಣದಿಂದ ಇರುತ್ತದೆ ಈ ಕಾರಣದಿಂದಲೇ ನರಗಳಿಗೂ ಮೆದಳಿಗೂ ಅತ್ಯಂತ ಬಲವನ್ನು ಕೊಡತಕ್ಕದಾಗಿದೆ. ನಿಮಗೆ ಜ್ಞಾಪಕ ಶಕ್ತಿಯು ಕಡಿಮೆಯಾಗಿದ್ದರೆ, ಮತ್ತು ತಲೆನೋವು, ಇದ್ದಕ್ಕಿದ್ದ ಹಾಗೆಯೇ ತಲೆ ತಿರುಗಿ ಬೀಳುವಂತಾಗುವುದು, ಭ್ರಮೆ, ಕಳವಳ, ಯಾವಾಗಲೂ ಸಿಡುಗುಟ್ಟುವುದು, ಇವೇ ಮುಂತಾದ ನರಗಳ ದೌರ್ಬಲ್ಯವಿದ್ದರೆ, ನಿತ್ಯದಲ್ಲಿ ನಿಮ್ಮ ಪ್ರತಿಯೊಂದು ಭೋಜನಕ್ಕೆ ಅರ್ಧ ಗಂಟೆ ಮೊದಲು ಹಣ್ಣಾಗಿರುವ ಎರಡು ಸೇವುಗಳನ್ನು ಸಿಪ್ಪೆ ಸಹಿತವಾಗಿ ತಿನ್ನುತ್ತ ಬನ್ನಿ ಕೆಲವು ದಿನಗಳೊಳಗೆ ನಿಮ್ಮ ನರಗಳ ಮತ್ತು ಮೆದಳಿನ ಬಲವು ವೃದ್ಧಿಯಾಗಿರುವುದನ್ನು ನೋಡಿ ನಿಮಗೇ ಆಶ್ಚರ್ಯವಾಗುತ್ತದೆ.

ಕಾಫಿ, ಟೀಗಳ ಅಭ್ಯಾಸವಿದ್ದರೆ ಅದನ್ನು ಬಿಟ್ಟು ನಿಂಬೆಹಣ್ಣಿನ ಪಾನಕವನ್ನಾಗಲಿ ಸೇಬಿನ ಟೀಯನ್ನಾಗಲಿ ಕುಡಿಯಿರಿ. ನಿಮ್ಮಲ್ಲಿ ವಿಲಕ್ಷಣವಾದ ಪರಿವರ್ತನೆ ಯುಂಟಾಗುತ್ತದೆ.

**ಸೇಬಿನ ಟೀ**—ಉತ್ತಮವಾದ ಸೇವನ್ನು ತಂದು ಮೊದಲು ತೊಳೆಯಿರಿ, ಆದರೆ ಸಿಪ್ಪೆಯನ್ನು ತೆಗೆಯ ಬೇಡಿ, ಬೇಗ ಬೇಗನೆ ಸಣ್ಣ ಸಣ್ಣ ಚೂರುಗಳನ್ನು ಮಾಡಿ ಮತ್ತು ಒಂದು ನಿಂಬೆಹಣ್ಣನ್ನೂ ಸಣ್ಣ ಚೂರುಗಳನ್ನಾಗಿ ಮಾಡಿ, ಅನಂತರ ಕುದಿಯುತ್ತಿರುವ ಅರ್ಧ ಸೇರು ನೀರಿನಲ್ಲಿ ಇವೆರಡನ್ನೂ ಹಾಕಿ, ಪಾತ್ರೆಯನ್ನು ಕೆಳಗಿಳಿಸಿ ೧೦ ನಿಮಿಷಗಳ ವರೆಗೆ ಮುಚ್ಚಿಟ್ಟಿದ್ದು ತಣ್ಣಗಾದನಂತರ ಶೋಧಿಸಿ ಕೊಂಡು ಸ್ವಲ್ಪ ಸಕ್ಕರೆಯನ್ನು ಹಾಕಿ ಕುಡಿಯಿರಿ. ನಿಮ್ಮ ಮನಸ್ಸು ಮತ್ತು ಇಂದ್ರಿಯಗಳಲ್ಲಿ ಅತಿಶಯವಾದ ಸ್ಫೂರ್ತಿಯುಂಟಾಗುತ್ತದೆ. ಜ್ವರದ ರೋಗಿಗಳಿಗೆ ಕುಡಿಸಿದರೆ ಬಾಯಾರಿಕೆ, ಸಂತಾಪ, ಕಳವಳ, ಇವೆಲ್ಲವೂ ಕೂಡಲೇ ಶಾಂತವಾಗುತ್ತವೆ. ಸೇವುಹಣ್ಣು ಸಂಧಿವಾತ (ಕೀಲುಗಳು ಹಿಡಿದುಕೊಳ್ಳುವಿಕೆ) ರೋಗಕ್ಕೂ ಪರಮೌಷಧವಾಗಿದೆ. ಸಂಧಿವಾತರೋಗ ಬಂದಾಗ ಕೀಲುಗಳಲ್ಲಿ "ಮಾಲಿಕ್ ಏಸಿಡ್" (Malice acid) ಎಂಬ ಸೀಮೆಸುಣ್ಣದಂತಿರುವ ಒಂದು ಪದಾರ್ಥವು ಕೂಡಿಕೊಂಡಿರುತ್ತದೆ. ಇದನ್ನು ಕರಗಿಸಿ ಸ್ವಚ್ಛಮಾಡ ತಕ್ಕ ಶಕ್ತಿಯು ಸೇವಿನಲ್ಲಿರುವಂತೆ ಇನ್ನಾವ ವಸ್ತುವಿನಲ್ಲಿಯೂ ಇಲ್ಲ. ಸೇವನ್ನು ಸಿಪ್ಪೆ ಸಹಿತವಾಗಿ ತಿನ್ನುವುದರಿಂದ ಜೀರ್ಣಕೋಶದ ವಿಕಾರವು ಶಾಂತವಾಗುತ್ತದೆ.

ಯಾರಿಗಾದರೂ ಕಣ್ಣಿನಲ್ಲಿ ದೃಷ್ಟಿಯು ಕಡಿಮೆಯಾಗಿದ್ದರೆ ಮತ್ತು ನೀರು ಸುರಿಯುತ್ತಿದ್ದರೆ (ಈ ರೋಗವು ೧೦-೨೦ ವರ್ಷಗಳ ಹಳೆಯದಾಗಿದ್ದರೂ ಸಹ) ಅವರು ದಯವಿಟ್ಟು ಚೆನ್ನಾಗಿ ಮಾಗಿರುವ ಒಂದು ಸೇವನ್ನು ಕುಟ್ಟಿ ಕಣ್ಣುಗಳ ಮೇಲೆ ಕಟ್ಟಿ ಪರೀಕ್ಷಿಸಬಹುದು. ಆಶ್ಚರ್ಯಕರವಾದ ಪ್ರಯೋಜನವುಂಟಾಗುತ್ತದೆ.

ಊಟದ ಜತೆಗೆ ಹೊಸಬೆಣ್ಣೆ ಮತ್ತು ಸೇವನ್ನು ನಿತ್ಯದಲ್ಲಿ ಉಪಯೋಗಿಸುವ ಪದ್ಧತಿಯನ್ನು ಕೆಲವು ದಿಸಗಳ ವರೆಗೆ ಅನುಸರಿಸುವುದಾದರೆ ನಿಮ್ಮ ಮುಖದ ಮೇಲೆ ಗುಲಾಬೀ ಹೂವಿನ ಬಣ್ಣವು ಬರು

ತ್ತದೆ. ಅಲ್ಲದೆ ಕಣ್ಣುಗಳಲ್ಲಿ ತೇಜಸ್ಸು, ಮೆದುಳಿನಲ್ಲಿ ಪ್ರಬಲವಾದ ಶಕ್ತಿ, ಮತ್ತು ನರಗಳಲ್ಲಿ ಕಬ್ಬಿಣದ ಶಕ್ತಿಯು ಬಂದು ಮಲಮೂತ್ರಗಳ ಕ್ರಮವು ಸರಿಗೊಳ್ಳುತ್ತದೆ. ನೀವು ತೆಳ್ಳಗೆ ಶಕ್ತಿಯಿಲ್ಲದೆ ನಿರುತ್ಸಾಹಿಗಳಾಗಿ ಬಹುಕಾಲದಿಂದ ನರಳುತ್ತಿದ್ದರೆ ಡಾಕ್ಟರ್ ಮತ್ತು ವೈದ್ಯರ ಕಡೆಗೆ ತಲೆಯು ಹೊಡೆಯದೆ ಸೇವಿನ ಮಧುರವಾದ ಸ್ವಾಭಾವಿಕ ರುಚಿಯನ್ನು ನೋಡಿರಿ. ಕೆಲವು ದಿನಗಳಲ್ಲಿ ನಿಮ್ಮ ಗುರುತು ನಿಮಗೇ ಇಲ್ಲದಂತಾಗುತ್ತದೆ.

ಯಕೃತ್ತಿನ (ಲೀವರ್) ರೋಗದಂತಹ ಕೆಟ್ಟ ರೋಗವು ಮತ್ತೊಂದಿಲ್ಲ. ಇದರ ಕಷ್ಟವು ಅನುಭವಿಸಿದವರಿಗೇ ಗೊತ್ತು. ಪ್ರತಿದಿನದಲ್ಲಿ ಯಕೃತ್ತಿನ ರೋಗದಿಂದ ನೂರಾರು ಜನರು ಸಾಯುತ್ತಾರೆ. ಸೇಕಡಾ ೮೦ ಜನಗಳಿಗೆ ಯಕೃತ್ತಿನ ತೊಂದರೆ ಇರುತ್ತದೆ. ಅದರಲ್ಲಿಯೂ ಸ್ತ್ರೀಯರೇ ಈ ರೋಗಕ್ಕೆ ಹೆಚ್ಚಾಗಿ ಗುರಿಯಾಗುತ್ತಾರೆ. ಯಕೃತ್ತಿನ ದೋಷದಿಂದಲೇ ಅನೇಕ ರೋಗಗಳು ಉಟ್ಟುವುವು. ಯಾವಾಗ ಯಕೃತ್ತಿನಲ್ಲಿ ವಿಕಾರವುಂಟಾಗುವುದೋ ಆಗ ಮುಖವು ಬಿಳುಪಾಗುತ್ತದೆ, ಯಾವಾಗಲೂ ಸಾಧಾರಣ ಜ್ವರವು ಇದ್ದೇ ಇರುತ್ತದೆ, ಶರೀರದ ರಕ್ತವೆಲ್ಲಾ ಕಾಂತಿಹೀನವಾಗಿ ಬಿಳಿಯ ಬಣ್ಣಕ್ಕೆ ತಿರುಗುತ್ತದೆ. ಇದು ಅತಿ ವೇಗದಿಂದ ಬೆಳೆದು ಭಯಂಕರ ರೋಗವಾಗಿ ಪರಿಣಮಿಸುತ್ತದೆ. ಸೇವು ಯಕೃತ್ತಿನ ವಿಕಾರಕ್ಕೆ ಸಂಜೀವನದಂತಿದೆ ಭೋಜನಕ್ಕೆ ಮೊದಲು ಎರಡೆರಡು ಸೇವುಗಳನ್ನು ಸಿಪ್ಪೆ ಸಹಿತವಾಗಿ ತಿನ್ನಬೇಕು ಅಥವಾ ಬರಿಯ ಹೊಟ್ಟೆಗೆ ಹಿಂದೆ ಬರೆದಿರುವ ಸೇವಿನ ಟೀಯನ್ನಾದರೂ ಕುಡಿಯಬಹುದು ಕೆಲವು ದಿನಗಳಲ್ಲಿ ಯಕೃತ್ತಿನ ಕಾರ್ಯವು ಉತ್ತಮಗೊಳ್ಳುತ್ತದೆ.

---

**ದಾಳಿಂಬೆ ಹಣ್ಣು**:—ಹುಳಿ, ಒಗರು, ಸಿಹಿ ರಸಗಳುಳ್ಳುದು, ಅತ್ಯಲ್ಪವಾದ ಉಷ್ಣದಿಂದ ಕೂಡಿರುವುದು, ವಾತನಾಶಕ, ಅಗ್ನಿದೀಪಕ, ಹೃದಯಕ್ಕೆ ಹಿತಕರವಾದುದು, ಪಿತ್ತ, ಕಫಗಳನ್ನು ಕೋಪಗೊಳಿಸದಿರುವುದು. ವಿಶೇಷ ಹುಳಿಯಾಗಿರುವ ಹಣ್ಣು ಪಿತ್ತ ವಾತಗಳನ್ನು ಕೋಪಗೊಳಿಸುತ್ತದೆ. ಸಿಹಿಯಾಗಿರುವ ಹಣ್ಣು ಪಿತ್ತನಾಶಕವಾಗಿರುತ್ತದೆ ಮತ್ತು ವಿಶೇಷ ಗುಣಕಾರಿಯಾಗಿರುತ್ತದೆ.

೧. ದಾಳಿಂಬೆಯ ಸಿಪ್ಪೆ ಕಾಲು ತೊಲ, ಅತಿಮಧುರ ಎರಡಾಣೆ ತೂಕ, ತಾರೇಕಾಯಿಯ ಸಿಪ್ಪೆ ಎರಡಾಣೆ ತೂಕ, ಇವುಗಳನ್ನು ಕುಟ್ಟಿ ಒಂದು ಸಾವು ನೀರಿನಲ್ಲಿ ಹಾಕಿ ಕುದಿಸಬೇಕು. ಒಂದು ಚಟಾಕು ನೀರು ಉಳಿದಿರುವುದನ್ನು ನೋಡಿ ಇಳಿಸಿಕೊಂಡು ಕಿವಿಚಿ ಶೋಧಿಸಿಕೊಂಡು ಒಂದು ತೊಲ ಕಲ್ಲುಸಕ್ಕರೆಯನ್ನು ಹಾಕಿ ಕುಡಿಯಬೇಕು. ಇದರಿಂದ ಒಣಕೆಮ್ಮು ಗುಣವಾಗುತ್ತದೆ.

೨. ದಾಳಿಂಬೆಯ ಎಲೆಗಳನ್ನು ಅರೆದು ಲೇಪಿಸಿದರೆ ಸುಟ್ಟ ಗಾಯದ ಉರಿಯು ಶಾಂತವಾಗುತ್ತದೆ.

೩. ದಾಳಿಂಬೆಯ ಎಲೆಗಳನ್ನು ಅರೆದು ಬಿಲ್ಲೆಯನ್ನು ಮಾಡಿ, ಆ ಬಿಲ್ಲೆಯನ್ನು ರಾತ್ರಿ ಮಲಗುವಾಗ ಕಣ್ಣುಗಳ ಮೇಲೆ ಕಟ್ಟಿದರೆ ಕಣ್ಣುಗಳಲ್ಲಿನ ಕೆಂಪುಬಣ್ಣವು ಹೋಗುತ್ತದೆ.

೪. ಹುಳಿದಾಳಿಂಬೆಯ ಬೀಜ ೮ ತೊಲ, ಸಕ್ಕರೆ ೧೨ ತೊಲ, ದಾಲಚೀನಿ ೧ ತೊಲ, ತೇಜಪತ್ರೆ ೧ ತೊಲ, ಏಲಕ್ಕಿ ೧ ತೊಲ, ಎಲ್ಲವನ್ನೂ ಕುಟ್ಟಿ ಶೋಧಿಸಿಕೊಂಡು, ಸ್ವಲ್ಪ ಸ್ವಲ್ಪ ಚೂರ್ಣವನ್ನು ತಿನ್ನುವುದರಿಂದ ಅರೋಚಕವು ನಾಶವಾಗುತ್ತದೆ ಮತ್ತು ಪೀನಸ, ಜ್ವರ, ಕೆಮ್ಮಲುಗಳು ಗುಣವಾಗುತ್ತವೆ.

೫. ೮ ತೊಲ ಹುಳಿದಾಳಿಂಬೆಯ ಬೀಜದ ಚೂರ್ಣ. ಕಲ್ಲುಸಕ್ಕರೆ ೩೨ ತೊಲ, ಶುಂಠಿಯ ಚೂರ್ಣ ೪ ತೊಲ, ಮೆಣಸಿನ ಚೂರ್ಣ ೪ ತೊಲ, ಹಿಪ್ಪಲಿಯ ಚೂರ್ಣ ೪ ತೊಲ, ದಾಲಚೀನಿಯ ಚೂರ್ಣ ೪ ತೊಲ, ಏಲಕ್ಕಿಯ ಚೂರ್ಣ ೪ ತೊಲ, ತೇಜಪತ್ರೆಯ ಚೂರ್ಣ ೪ ತೊಲ, ಇವುಗಳನ್ನೆಲ್ಲಾ ಕೂಡಿಸಿ ಶೋಧಿಸಿಕೊಳ್ಳಿ. ಇದರ ಸೇವನೆಯಿಂದ ಅರುಚಿಯು ನಾಶವಾಗಿ ಆಹಾರದಲ್ಲಿ ಅಭಿರುಚಿಯು ಹುಟ್ಟುತ್ತದೆ. ಜಠರಾಗ್ನಿಯು ವೃದ್ಧಿಯಾಗುವುದಲ್ಲದೆ ಹೃದಯಕ್ಕೆ ಅತ್ಯಂತ ಹಿತಕರವಾಗಿರುತ್ತದೆ. ನೂರಾರು ಸಲ ಪರೀಕ್ಷಿಸಿರುವುದಾಗಿದೆ.

೬. ದಾಳಿಂಬೆಯ ಮೊಗ್ಗು=ತೂಕ, ಬೂರಗದಎಲೆ= ತೂಕ, ತುಪ್ಪದಲ್ಲಿ ಹುರಿದ ಸೌಂಪು= ತೂಕ, ಸುಟ್ಟುಕರಕಾಗಿರುವ ಗಸಗಸೆ =ತೂಕ, ಇವುಗಳನ್ನು ಕುಟ್ಟಿ ಅರೆದು, ಎರಡೆರಡು ಗುರುಗಂಜಿಗ

ಳಿಷ್ಟು ಔಷಧವನ್ನು ಎದೆಹಾಲಿನೊಡನೆ ಕೊಡುವುದರಿಂದ ಮಕ್ಕಳ ಅತಿಸಾರವು ನಿಲ್ಲುತ್ತದೆ. ಇದನ್ನು ಪ್ರಾತಃಕಾಲ ಮಧ್ಯಾಹ್ನ ಸಾಯಂಕಾಲಗಳಲ್ಲಿ ಕೊಡಬೇಕು.

೭. ದಾಳಿಂಬೆಹಣ್ಣಿನ ಹಸಿಸಿಪ್ಪೆ ೧ ತೊಲ ಮತ್ತು ಕೊಡಸಿಗೆ ಚಕ್ಕೆ ಅಥವಾ ಬೀಜ ೧ ತೊಲ ಇವೆರಡನ್ನು ಕುಟ್ಟಿ ೧೬ ತೊಲ ನೀರಿನಲ್ಲಿ ಹಾಕಿ ೨ ತೊಲ ಕಷಾಯವನ್ನು ಇಳಿಸಿಕೊಂಡು ತಣ್ಣಗೆ ಮಾಡಿ ಜೇನುತುಪ್ಪವನ್ನು ಹಾಕಿ ಕುಡಿಯುವುದರಿಂದ ಕೂಡಲೇ ರಕ್ತಭೇದಿಯು ನಿಂತು ಹೋಗುತ್ತದೆ.

೮. ದಾಳಿಂಬೆಯಮೊಗ್ಗು, ತುಲಸಿ ಎಲೆ, ಗರಿಕೆ, ಇವುಗಳನ್ನು ಅರೆದು ಬಟ್ಟೆಯಲ್ಲಿಟ್ಟು ೩-೪ ಹನಿಗಳನ್ನು ಮೂಗಿಗೆ ಹಿಂಡುವುದರಿಂದ ಬಿಕ್ಕಳಿಕೆಯು ನಿಶ್ಚಯವಾಗಿ ನಿಂತು ಹೋಗುತ್ತದೆ.

೯. ದಾಳಿಂಬೆಯ ಹೂವು, ಗರಿಕೆ, ಹಸಿ ಅರಗು, ನೆಲ್ಲಿಕಾಯಿ ಅಥವಾ ನೆಲ್ಲಿಚೆಟ್ಟು, ಅಳಲೆಕಾಯಿ, ಇವುಗಳನ್ನು ನೀರಿನಲ್ಲಿ ಅರೆದು ಮೂರು ದಿನಗಳ ವರೆಗೆ ನಸ್ಯದಂತೆ ಏರಿಸುವುದರಿಂದ ಮೂಗಿನಿಂದ ರಕ್ತ ಬೀಳುವುದು ನಿಲ್ಲುತ್ತದೆ.

೧೦. ದಾಳಿಂಬೆಯ ಎಲೆ, ಬೇಲದ ಎಲೆ, ತುಲಸಿಯ ಎಲೆ, ಬಿಲ್ವಪತ್ರೆ, ವಿಷ್ಣುಕ್ರಾಂತಿ ಸೊಪ್ಪಿನಬೇರು, ದ್ರಾಕ್ಷೆ, ಅಶ್ವಗಂಧ, ಇವುಗಳನ್ನು ಸಮಭಾಗದಿಂದ ಅರೆದು ಜೇನುತುಪ್ಪದೊಡನೆ ತಿನ್ನಿಸಿದರೆ ಮಂಡಲದ ಹಾವಿನ ವಿಷವು ಇಳಿಯುತ್ತದೆ. ಇದರ ಜತೆಗೆ ಯಾವುದಾದರೊಂದು ಅಂಜನವನ್ನೂ ಕಣ್ಣಿಗೆ ಹಚ್ಚಿದರೆ ಉತ್ತಮ.

೧೧. ದಾಳಿಂಬೆಯ ಮೊಗ್ಗು, ಕಾಚು, ಕಲ್ಲುಸಕ್ಕರೆ, ಇವುಗಳನ್ನು ಸಮಭಾಗವಾಗಿ ಕುಟ್ಟಿ ಚೂರ್ಣಿಸಿ ನಿತ್ಯದಲ್ಲಿ ಅರ್ಧ ಅರ್ಧ ತೊಲದಂತೆ ಸೇವಿಸಿ ನೀರನ್ನು ಕುಡಿಯಬೇಕು. ಇದರಿಂದ ಸಕಲ ವಿಧ ಪ್ರಮೇಹಗಳೂ ಶಾಂತವಾಗುತ್ತವೆ.

೧೨. ದಾಳಿಂಬೆಯ ಗಿಡದ ಬೇರನ್ನು ನೀರಿನೊಡನೆ ಅರೆದು ಹಣೆಗೆ ಲೇಪಿಸುವುದರಿಂದ ಆಯಾಸದಿಂದ ಅಥವಾ ಉಷ್ಣದಿಂದ ಬಂದಿರುವ ತಲೆನೋವು ನಿಲ್ಲುತ್ತದೆ.

೧೩. ದಾಳಿಂಬೆಯ ಸಿಪ್ಪೆ ೩ ತೊಲ, ಕಾಚು ೩ ತೊಲ, ಅತಿ ಮಧುರ ೩ ತೊಲ, ಮೆಣಸು ೩ ತೊಲ, ಲವಂಗ ೩ ತೊಲ, ಬೂರಗದ ಬಂಕೆ ೩ ತೊಲ, ಕಲ್ಲುಸಕ್ಕರೆ ೩ ತೊಲ, ಇವುಗಳನ್ನೆಲ್ಲಾ ಕುಟ್ಟಿ ಶೋಧಿಸಿ ನೀರಿನೊಡನೆ ೩ ಗಂಟೆಗಳ ವರೆಗೆ ಅರೆದು ಕಡಲೆಕಾಳಿನಷ್ಟು ಮಾತ್ರೆಗಳನ್ನು ಮಾಡಿ ನೆರಳಿನಲ್ಲಿ ಒಣಗಿಸಿಟ್ಟುಕೊಳ್ಳಬೇಕು. ಈ ಮಾತ್ರೆಗಳಲ್ಲಿ ಒಂದು ಅಥವಾ ಎರಡನ್ನು ಬಾಯಿಯಲ್ಲಿಟ್ಟುಕೊಂಡು ರಸವನ್ನು ನುಂಗುತ್ತಿಷ್ಟರೆ ಸಕಲವಿಧ ಕೆಮ್ಮುಗಳು ಗುಣವಾಗುತ್ತವೆ. ಪರೀಕ್ಷಿಸಲ್ಪಟ್ಟಿದೆ.

೧೪. ಪಕ್ವವಾಗಿರುವ ಸಿಹಿ ದಾಳಿಂಬೆಹಣ್ಣಿನ ಅರ್ಧ ಸೇರು ರಸದಲ್ಲಿ ೨॥ ಸೇರು ಕಲ್ಲುಸಕ್ಕರೆಯನ್ನು ಹಾಕಿ ಕಲಾಯಿಯ ಪಾತ್ರೆಯಲ್ಲಿ ಕಾಯಿಸಿರಿ, ಪಾಕವು ಬಂದಮೇಲೆ ಬಿದರುಪ್ಪು, ಏಲಕ್ಕಿ, ಧನಿಯಾ, ಅಮೃತಬಳ್ಳಿಸಕ್ಕರೆ (ತಿಪ್ಪಸತ್ತು) ದಾಳಿಂಬೆಯ ಬೀಜ ಬಿಲ್ಪದ ತಿರಳು, ಪುದೀನಾ, ದಾಲಚೀನಿ, ಜಾಕಾಯಿ, ನಾಗಕೇಸರಿ, ಶುಂಠಿ, ಪ್ರತಿಯೊಂದು ಕಾಲು ಕಾಲು ತೊಲ ತಂದು ಪುಡಿಮಾಡಿಟ್ಟುಕೊಂಡಿದ್ದು ಪಾಕದಲ್ಲಿ ಹಾಕಿ ಕಳಗಿಳಿಸಿ ಬೇರೆ ತೆಗೆದಿಟ್ಟುಕೊಳ್ಳಬೇಕು. ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಒಂದೊಂದು ತೊಲ ಈ "ದಾಡಿಮಾವಲೇಹ"ವನ್ನು ಸೇವಿಸುವುದರಿಂದ ರಕ್ತಭೇದಿ, ಸಂಗ್ರಹಣಿ, ಮಂದಾಗ್ನಿ, ಇವುಗಳು ನಾಶವಾಗಿ ಜಠರಾಗ್ನಿಯು ಬಲಗೊಳ್ಳುತ್ತದೆ. ಇದು ಹೃದಯಕ್ಕೆ ಬಹಳ ಹಿತಕಾರಿಯಾಗಿರುತ್ತದೆ.

---

ಕಿತ್ತಳೆ ಹಣ್ಣು—ಗಿಡದಲ್ಲಿಯೇ ಪಕ್ವವಾಗಿರುವ ಕಿತ್ತಳೆಯು ಸಿಹಿಯಾಗಿಯೂ, ಅತಿ ಶೀತಲವಾಗಿಯೂ ಇರುವುದು. ಸಕಲವಿಧ ಪ್ರಮೇಹ-ಶೂಲ-ಕ್ಷಯ-ಪಿತ್ತವಿಕಾರ-ದಾಹ ಇವುಗಳನ್ನು ಶಾಂತಗೊಳಿಸುವುದಲ್ಲದೆ, ರಕ್ತ ಮತ್ತು ಮೂತ್ರಾಶಯವನ್ನು ಶುದ್ಧಗೊಳಿಸಿ ಅಗ್ನಿಯನ್ನು ಹೆಚ್ಚಿಸಿ ಆಯಾಸವನ್ನು ನಿವಾರಿಸುವುದಾಗಿದೆ. ಹುಳಿಯಾಗಿರುವ ಹಣ್ಣು ಅತ್ಯುಷ್ಣಗುಣವುಳ್ಳುದು, ಕೆಮ್ಮು ಮತ್ತು ಕಫವನ್ನು ಹೆಚ್ಚಿಸಿ ಗಂಟಲು-ಕಣ್ಣುಗಳಿಗೆ ವಿಶೇಷ ಹಾನಿಯನ್ನುಂಟು ಮಾಡುತ್ತದೆ.

ರಕ್ತದ ಮೇಲೆ ಕಿತ್ತಳೆಹಣ್ಣಿನ ಪ್ರಭಾವವು ನಿಂಬೆಹಣ್ಣಿಗಿಂತಲೂ ಹೆಚ್ಚಾಗಿ ಬೀಳುತ್ತದೆ. "ಇನ್‌ಫ್ಲೂಎಂಜಾ" ರೋಗಕ್ಕೆ ಕಿತ್ತಳೆಹಣ್ಣು ರಾಮಬಾಣದಂತಿದೆ. ಈ ರೋಗವು ಹಬ್ಬುತ್ತಿರುವ ಕಾಲದಲ್ಲಿ ಯಥೇಷ್ಟವಾಗಿ ಕಿತ್ತಳೆಹಣ್ಣನ್ನು ತಿನ್ನುತ್ತಿದ್ದರೆ ಶರೀರದ ಮೇಲೆ ರೋಗದ ಆಕ್ರಮಣವಾಗುವುದಿಲ್ಲ. ಒಂದುವೇಳೆ ಆಕ್ರಮಣವಾದರೂ ಎದೆಗುಂದದೆ ಮೂರು ನಾಲ್ಕು ದಿನಗಳ ವರೆಗೆ ಇತರವಿಧ ಆಹಾರ ಗಳನ್ನೆಲ್ಲಾ ಬಿಟ್ಟು ಕಿತ್ತಳೆಹಣ್ಣನ್ನು ಮಾತ್ರ ತಿನ್ನುತ್ತ ಕಾಯಿಸಿದ ಶುದ್ಧವಾದ ನೀರನ್ನು ಕುಡಿಯುತ್ತಿರಬೇಕು. ಈ ಉಪಾಯವು ಸರ್ವ ಶ್ರೇಷ್ಠವಾಗಿರುತ್ತದೆ.

ಸಣ್ಣ ಕಿತ್ತಳೆಹಣ್ಣಿನ ಸಿಪ್ಪೆಯು ಮಲೇರಿಯಾ ಜ್ವರಕ್ಕೆ ಅತ್ಯುತ್ತಮವಾದ ಔಷಧಿಯಾಗಿದೆ ಮತ್ತು ಶಕ್ತಿವರ್ಧಕವೂ ಆಗಿದೆ. ಈ ಸಿಪ್ಪೆಯ ರಸದಲ್ಲಿ "ಕ್ವಿನಾಯಿನ್ನಿನ" ಗುಣವಿರುತ್ತದೆ. ಒಂದು ಹಣ್ಣಿನ ಸಿಪ್ಪೆಯನ್ನು ಒಂದು ಪಾವು ನೀರಿನಲ್ಲಿ ಹಾಕಿ, ನಾಲ್ಕನೆಯ ಒಂದುಭಾಗ ಉಳಿಯುವವರೆಗೆ ಕಾಯಿಸಿ, ಶೋಧಿಸಿಕೊಂಡು ಬಿಸಿ ಬಿಸಿಯಾಗಿರುವಾಗಲೇ ಕುಡಿಯಬೇಕು.

ಅಸ್ಥಿಜ್ವರ ಮತ್ತು ಹೃದಯರೋಗಕ್ಕೆ ಕಿತ್ತಳೆಯು ಬಹಳ ಪ್ರಯೋಜನಕರವೆಂದು ಸಿದ್ಧವಾಗಿದೆ. ಹೃದಯದ ದುರ್ಬಲತೆ ಯುಂಟಾದಾಗ ಕಿತ್ತಳೆಯನ್ನು ಯಥೇಷ್ಟವಾಗಿ ತಿನ್ನಬೇಕು. ಶ್ವಾಸ ರೋಗ ಮತ್ತು ಮಂದಾಗ್ನಿಯ ರೋಗಿಯು ಕಿತ್ತಳೆಯನ್ನು ವಿಶೇಷ ವಾಗಿ ಸೇವಿಸಬೇಕು. ಹಸಿವಾಗದಿದ್ದರೆ, ಅಜೀರ್ಣವಿದ್ದರೆ, ಪ್ರಾತಃ ಕಾಲದಲ್ಲಿ ಬರಿಯ ಹೊಟ್ಟೆಗೆ ನಿತ್ಯದಲ್ಲಿ ಒಂದೆರಡು ಕಿತ್ತಳೆಯ ಹಣ್ಣು ಗಳನ್ನು ಸೇರಿಸಬೇಕು. ಮೂರ್ಛೆರೋಗದವರಿಗೆ ಕಿತ್ತಳೆಯು ಅತ್ಯಂತ ಹಿತಕರವಾಗಿದೆ. ಕಿತ್ತಳೆಯ ಕಾಲದಲ್ಲಿ ಉತ್ತಮ ಹಣ್ಣುಗಳನ್ನು ತಂದು ಸಿಪ್ಪೆಯನ್ನು ತೆಗೆದು ಒಣಗಿಸಿ ಚೂರ್ಣವನ್ನುಮಾಡಿ ಇಟ್ಟು ಕೊಳ್ಳಬಹುದು. ಹಣ್ಣಿನ ಅಭಾವದ ಕಾಲದಲ್ಲಿ ಈ ಚೂರ್ಣವನ್ನು ಕುದಿಯುವ ನೀರಿನಲ್ಲಿ ಹಾಕಿ ಕುದಿಸಿ ಟೀಯಂತೆ ಉಪಯೋಗಿಸ ಬಹುದು. ಚೂರ್ಣವು ಒಂದು ವರ್ಷದವರೆಗೆ ಕೆಡುವುದೂ ಇಲ್ಲ.

ಕಿತ್ತಳೆಯ ಹಣ್ಣನ್ನು ನೀವು ಮನೆಗೆ ತಂದಾಗ ಹಣ್ಣನ್ನು ಸುಲಿದು ಸಿಪ್ಪೆಯನ್ನು ಮಾತ್ರ ಬಿಸಾಡಬೇಡಿ! ಒಂದು ಡಬ್ಬದಲ್ಲಿ

ಹಾಕಿ ಒಂಬತ್ತು ಕಡೆಗೆ ಇಟ್ಟು ಬಿಡಿ ಅದು ಪೂರ್ತಿಯಾಗಿ ಒಣಗಿದ ಮೇಲೆ ನುಣ್ಣಗೆ ಕುಟ್ಟಿ ಬಟ್ಟೆಯಿಂದ ಶೋಧಿಸಿಕೊಂಡು ಒಂದು ಸೀಸೆಯಲ್ಲಿಟ್ಟಿರಿ. ಯಾರಿಗಾದರೂ ಹುಳಕಡ್ಡಿ ತುರಿ, ಇಸಬು, ಗಜಕರ್ಣ ಮುಂತಾದ ಚರ್ಮರೋಗಗಳು ಒಂದು ಬಹು ದಿನಗಳಿಂದ ಪೀಡಿಸುತ್ತಿದ್ದರೆ ನಿಮ್ಮಲ್ಲಿರುವ ಚೂರ್ಣವನ್ನು ಬೇವಿನ ಎಣ್ಣೆ, ಹೊಂಗೆಯ ಎಣ್ಣೆ, ಕೊಬರಿಯ ಎಣ್ಣೆ, ಹಳೆಯ ತುಪ್ಪ, ಎಳ್ಳೆಣ್ಣೆ, ಇವುಗಳಲ್ಲಾವುದರೊಡನೆಯಾದರೂ ಕೂಡಿಸಿ ಹಚ್ಚಿ ತಿಕ್ಕಿಸಿ ಬಿಡಿ ಎಂತಹ ಚರ್ಮರೋಗವಾದರೂ ಆಗಿರಲಿ ನಾಶವಾಗುತ್ತದೆ. ಆತುರಪಡಬೇಡಿ ದಿನಕ್ಕೊಂದನ್ನು ಬದಲಾಯಿಸಿದರೆ ಎಂತಹ ಔಷಧ ವಾದರೂ ಗುಣವನ್ನು ತೋರಿಸಲಾರದು.

---

**ದ್ರಾಕ್ಷಿ**—ಸಿಹಿ, ಸ್ವಲ್ಪ ಶೀತಲವಾದುದು, ಮಲವನ್ನು ಸಡಲಿಸು ವುದು, ಸ್ವರವನ್ನು ಉತ್ತಮಗೊಳಿಸುವುದು ಮತ್ತು ರಕ್ತಪಿತ್ತ-ಜ್ವರ-ಉಬ್ಬಸ-ಬಾಯಾರಿಕೆ-ಉರಿ-ಕ್ಷಯ ಇವುಗಳನ್ನು ನಿವಾರಿಸುವುದು ಮತ್ತು ಶರೀರಕ್ಕೆ ಬಲವನ್ನೂ ಕಾಂತಿಯನ್ನೂ ಉಂಟುಮಾಡುತ್ತದೆ.

ದ್ರಾಕ್ಷಿಹಣ್ಣಿನಲ್ಲಿ ಒಂದು ಅದ್ಭುತ ಗುಣವಿದೆ. ಶರೀರದಲ್ಲಿ ಬಲವಿಲ್ಲದೆ ರಕ್ತ ಮಾಂಸಾದಿಗಳಿಗೆ ಪೋಷಕವಾಗಿರುವ ರಸಧಾತುವು ಪೂರ್ಣವಾಗಿ ಹುಟ್ಟದಿರುವಾಗ ದ್ರಾಕ್ಷಿಯು ಆ ರಸವನ್ನು ಬಹು ಬೇಗನೆ ಹುಟ್ಟಿಸುತ್ತದೆ. ದಿನದಿನಕ್ಕೆ ಒಣಗಿಕೊಂಡು ಹೋಗುತ್ತಿರುವ ಅಜೀರ್ಣರೋಗಿಯು ದ್ರಾಕ್ಷಿಯನ್ನು ತಿನ್ನಲಾರಂಭಿಸಿದರೆ ಸ್ವಲ್ಪ ಕಾಲ ದಲ್ಲಿಯೇ ಅವನ ಶರೀರದಲ್ಲಿ ಶಕ್ತಿಪ್ರವಾಹವು ವಿದ್ಯುತ್ತಿನಂತೆ ಪ್ರಸರಿ ಸುತ್ತದೆ. ಕಂಠಪೂರ್ತಿಯಾಗಿ ಮಿಷ್ಟಾನ್ನಗಳನ್ನು ತುಂಬಿ ಹೊಟ್ಟೆಯ ನ್ನೆತ್ತುವುದಕ್ಕಾಗದಿರುವಾಗ ದ್ರಾಕ್ಷಿಯನ್ನು ಸಾಕಾಗುವಷ್ಟು ತಿಂದರೆ ಸ್ವಲ್ಪ ಹೊತ್ತಿನಲ್ಲೇ ಹೊಟ್ಟೆಯು ಹಗುರವಾಗುತ್ತದೆ. ಜ್ವರದ ರೋಗಿಯು ಅಥವಾ ಕ್ಷಯದ ರೋಗಿಯು ದಿನದಿನಕ್ಕೆ ಕುಗ್ಗುತ್ತಿದ್ದರೆ ಹಣ್ಣಾದ ದ್ರಾಕ್ಷಿಯನ್ನು ಹಿಂಡಿ ರಸವನ್ನು ಕುಡಿಸಿರಿ, ಮಕ್ಕಳು ಜನ್ಮ ದಿಂದಲೇ ದುರ್ಬಲರಾಗಿದ್ದು ಅವಯವಗಳು ಪುಷ್ಟವಾಗದಿರುವಾಗ ದ್ರಾಕ್ಷಿಯ ರಸವನ್ನು ನಿತ್ಯದಲ್ಲಿ ನಿಯಮದಿಂದ ಕುಡಿಸುತ್ತಿರಿ, ಒಂದು ವಾರದೊಳಗಾಗಿ ವಿಚಿತ್ರಗುಣವು ಕಂಡುಬರುತ್ತದೆ. ದ್ರಾಕ್ಷಿಯನ್ನು

ಅಗಿದು ರಸ ಮತ್ತು ತಿರುಳನ್ನು ನುಂಗಿ ಬೀಜವನ್ನು ಉಗುಳಬೇಕಾದುದು ಮುಖ್ಯವಾಗಿದೆ. ಅನೇಕರು ದ್ರಾಕ್ಷಿಯು ಬಾಯಿಗೆ ಬಿದ್ದ ಕೂಡಲೇ ಹಾಗೆಯೇ ನುಂಗಿಬಿಡುತ್ತಾರೆ. ಇದರಿಂದ ದ್ರಾಕ್ಷಿಯ ಪ್ರಭಾವವು ಶರೀರಕ್ಕೆ ವ್ಯಾಪಿಸುವುದಿಲ್ಲ. ಹೃದಯವು ದುರ್ಬಲವಾಗಿದ್ದರೆ ಅಥವಾ ಶ್ವಾಸರೋಗವು ತಲೆಹಾಕುತ್ತಿದ್ದರೆ ಮತ್ತು ಹೃದಯದ ಸ್ಪಂದನವು (ಹಾರುವಿಕೆ) ಅತಿ ವೇಗವಾಗಿದ್ದರೆ ಸಿಹಿಯಾದ ದ್ರಾಕ್ಷಿಯನ್ನು ತಿನ್ನಬೇಕು. ಕೀಲುಗಳು ಹಿಡಿದುಕೊಂಡಿದ್ದರೆ, ಯಕೃತ್ತಿನಲ್ಲಿ (ಲೀವರ್) ವಿಕಾರವುಂಟಾಗಿದ್ದರೆ ಮತ್ತು ಅಜೀರ್ಣಸಂಬಂಧವಾದ ತೊಂದರೆಯಿದ್ದರೆ, ಸ್ವಲ್ಪ ಹುಳಿಯಾಗಿರುವ ದ್ರಾಕ್ಷಿಯನ್ನು ತಿನ್ನಬೇಕು.

ಕೆಲವು ಚಿಕಿತ್ಸಕರು ಕೀಲುನೋವಿನ ರೋಗಿಗಳಿಗೆ ದ್ರಾಕ್ಷಿಯನ್ನು ತಿನ್ನುವ ಸಲಹೆಯನ್ನು ಕೊಡದಿರಬಹುದು. ಆದರೆ ನನ್ನ ಸ್ವಂತ ಅನುಭವದಿಂದ ಈ ರೋಗಕ್ಕೆ ದ್ರಾಕ್ಷಿಯು ಬಹಳ ಪ್ರಯೋಜನಕಾರಿಯೆಂದು ತಿಳಿದು ಬಂದಿದೆ. ನಾನು ಕಾಶಿಯಲ್ಲಿ ಚಿಕಿತ್ಸೆಯನ್ನು ಮಾಡುತ್ತಿರುವಾಗ ನಾಲ್ಕೈದು ಸಂಧಿವಾತದ ರೋಗಿಗಳಿಗೆ ದ್ರಾಕ್ಷಿಯನ್ನು ಹೆಚ್ಚಾಗಿ ತಿನ್ನುವ ಸಲಹೆಯನ್ನು ಕೊಡಲಾಗಿ ವಿಶೇಷ ಲಾಭವು ಕಂಡು ಬಂದಿತು. ಇದರ ಸಂಗಡ ಕಾಯಿ ಸೊಪ್ಪುಗಳನ್ನೂ ಹೆಚ್ಚಾಗಿ ಉಪಯೋಗಿಸುವಂತೆ ಹೇಳಲಾಗಿದ್ದಿತು.

ಉತ್ತರಭಾರತದ ಅನೇಕ ಪ್ರಸಿದ್ಧವೈದ್ಯರುಗಳು ದ್ರಾಕ್ಷಿ ಮತ್ತು ಸೊಪ್ಪು ಕಾಯಿಗಳನ್ನು ವಿಶೇಷವಾಗಿ ಕೊಟ್ಟು ಸಂಧಿವಾತರೋಗವನ್ನು ಗುಣಮಾಡಿರುವ ಉದಾಹರಣೆಗಳು ಎಷ್ಟೋ ಇವೆ. ಆದರೆ ರೋಗಿಯು ಧೈರ್ಯ ಮತ್ತು ಸಂಯಮಿಯಾಗಿರಬೇಕಾಗುತ್ತದೆ. ನಾಲಗೆಯ ಚಟದವರಿಗೆ ಇದು ಸಾಧ್ಯವಾಗತಕ್ಕುದಲ್ಲ.

ಮಲೇರಿಯಾ ರೋಗಿಗೆ ದ್ರಾಕ್ಷಿಯು ಅಪೂರ್ವ ವಸ್ತುವಾಗಿದೆ. ಇದರ ಸೇವನೆಯಿಂದ ಅನೇಕ ರೋಗಿಗಳಿಗೆ ನೆಮ್ಮದಿಯುಂಟಾಗಿದೆ. ಹೊಸ ಸುಣ್ಣವನ್ನು ನೀರಿನಲ್ಲಿ ಹಾಕಿ ಕರಗಿಸಿ ಶೋಧಿಸಿಕೊಂಡು ಆ ಸುಣ್ಣದ ನೀರಿನಲ್ಲಿ ದ್ರಾಕ್ಷಿಯ ಹಣ್ಣನ್ನು ಮೂರು ಗಂಟೆಗಳ ವರೆಗೆ ಮುಳುಗಿಸಿಟ್ಟಿದ್ದು ಅನಂತರ ಅದರ ರಸವನ್ನು ಹಿಂಡಿ ಕುಡಿಸಬೇಕು ಅಥವಾ ಹಾಗೆಯೇ ತಿನ್ನುವಂತಿದ್ದರೆ ಚೆನ್ನಾಗಿ ಅಗಿದು ರಸ ಮತ್ತು ತಿರುಳನ್ನು ನುಂಗಬೇಕು.

ದ್ರಾಕ್ಷೆಯು ದೊರೆಯದಿರುವ ಕಾಲದಲ್ಲಿ ಒಣಗಿದ ಸಣ್ಣದ್ರಾಕ್ಷೆಯ ಟೀಯನ್ನು ಮಾಡಿ ಕುಡಿಯಬಹುದು. ಈ ದ್ರವ ವಸ್ತುವು ಶರೀರಕ್ಕೆ ಆನಂದವನ್ನೀಯುವ ಪುಷ್ಟಿಕರ ಮತ್ತು ತೃಪ್ತಿಕರವಾದ ಪಾನೀಯವಾಗಿರುತ್ತದೆ. ಆಯಾಸವುಂಟಾಗಿರುವ ಕಾಲದಲ್ಲಂತೂ ಇದು ಬಹಳ ಚಮತ್ಕಾರವನ್ನು ತೋರಿಸುವುದು. ಇದರಲ್ಲಿರುವ ಪೋಷಕ ತತ್ವವು ಹಾಲಿಗೆ ಸಮಾನವಾಗಿರುತ್ತದೆ. ಅಲ್ಲದೆ ಹಾಲಿಗಿಂತಲೂ ಬಹು ಬೇಗನೆ ಪಚನವಾಗುತ್ತದೆ. ಈ ಕಾರಣದಿಂದ ಯಾರಿಗೆ ಹಾಲು ಕುಡಿಯುವುದರಿಂದ ಹೊಟ್ಟೆಯಲ್ಲಿ ವಾಯುವು ತುಂಬಿಕೊಳ್ಳುವುದೋ ಅವರಿಗೆ ಈ ದ್ರಾಕ್ಷೆಯ ಟೀಯು ಬಹಳ ಗುಣಕಾರಿಯಾಗಿರುತ್ತದೆ. ಯಾರಿಗಾದರೂ ಹೊಟ್ಟೆಯಲ್ಲಿ ವಾಯುವು ಸೇರಿಕೊಂಡಿದ್ದರೆ, ಅಥವಾ ಹೊಟ್ಟೆಯಲ್ಲಿ ಗ್ಯಾಸ್ ಉತ್ಪನ್ನವಾಗುವ ಬಹುಕಾಲದ ತೊಂದರೆಯಿದ್ದರೆ, ಜನ್ಮಾಂತರದ ಮಲಬದ್ಧತೆಯು ಕಾಡಿಸುತ್ತಿದ್ದರೆ, ಅಂತಹ ಜನಗಳು ದಯವಿಟ್ಟು ಈ ದ್ರಾಕ್ಷೆಯ ಟೀಯನ್ನು ಮಾಡಿ ಕೆಲವು ಕಾಲದ ವರೆಗೆ ನಿಯಮದಿಂದ ಕುಡಿಯುತ್ತಾ, ಇತರ ಆಹಾರವನ್ನೆಲ್ಲಾ ಬಿಟ್ಟು ಕೇವಲ ಸುಪಕ್ವವಾದ ಬಾಳೆಯ ಹಣ್ಣನ್ನೇ ಸೇವಿಸುತ್ತಿರುವುದಾದರೆ ನಿಸ್ಸಂದೇಹವಾಗಿ ಸಾವಿರಾರು ರೂಪಾಯಿಗಳ ಖರ್ಚಿನ ಟಾಣಿಕ್ ಮತ್ತು ಇತರ ವಿಧ ಔಷಧಿಗಳ ಸೇವನೆಯಿಂದ ಆಗದಿರುವ ಗುಣವು ಈ ಅತಿ ಸುಲಭ ಸಾಧ್ಯವಾದ ದ್ರಾಕ್ಷೆಯ ಟೀಯಿಂದ ದೊರೆಯುತ್ತದೆ. ಆದರೆ ಇದಕ್ಕೆ ಧೈರ್ಯ, ಸ್ಥೈರ್ಯ ಮತ್ತು ನಾಲಗೆಯ ಹಿಡಿತ, ಇವುಗಳು ಅತಿ ಮುಖ್ಯವಾಗಿರುತ್ತವೆ. ಕಾಫಿ, ಟೀ ಮುಂತಾದುವುಗಳನ್ನೆಲ್ಲಾ ಬಿಟ್ಟು ಇದೊಂದನ್ನೇ ಕುಡಿಯತಕ್ಕವರಿಗೆ ಸಂಶಯವಿಲ್ಲದೆ ಹೊಸ ಜೀವನವು ಪ್ರಾಪ್ತಿಯಾಗುತ್ತದೆ.

**ದ್ರಾಕ್ಷೆಯ ಟೀ**—ಇಪ್ಪತ್ತು ತೊಲ ಉತ್ತಮವಾದ ದ್ರಾಕ್ಷೆಯನ್ನು ತಂದು ಕಸ ಕಡ್ಡಿಗಳನ್ನು ಆರಿಸಿ ಮೊದಲು ಸ್ವಲ್ಪ ಬಿಸಿಯಾಗಿರುವ ನೀರಿನಿಂದ ಬೇಗನೆ ತೊಳೆಯಿರಿ, ಅನಂತರ ಒಂದು ಪಾತ್ರೆಯಲ್ಲಿ ಎರಡೂವರೆ ಸೇರು ನೀರನ್ನು ಹಾಕಿ ಒಲೆಯ ಮೇಲಿಡಿರಿ, ನೀರು ಕುದಿಯುತ್ತ ಬಂದಾಗ ದ್ರಾಕ್ಷೆಯನ್ನು ಸ್ವಲ್ಪ ಜಜ್ಜಿ ನೀರಿನಲ್ಲಿ ಹಾಕಿ ಬಿಡಿರಿ ಮತ್ತು ಯಾವಾಗ ಎರಡು ಪಾವು ನೀರು ಉಳಿಯುವುದೋ ಆಗ ಪಾತ್ರೆಯನ್ನು ಕೆಳಗಿಳಿಸಿ ಸ್ವಚ್ಛವಾದ ಬಟ್ಟೆಯಿಂದ

ಶೋಧಿಸಿಕೊಳ್ಳಿರಿ. ಬೇಕಾದರೆ ನಿಂಬೆಯ ಹಣ್ಣಿನ ರಸವನ್ನೂ ಸ್ವಲ್ಪ ಸೇರಿಸಿಕೊಳ್ಳಬಹುದು.

೧. ಒಣಗಿದ ಬೀಜದ ದ್ರಾಕ್ಷಿ ೩ ತೊಲ, ಮೆಣಸು ೩ ತೊಲ, ಅತಿ ಮಧುರ ೩ ತೊಲ, ಕಲ್ಲುಸಕ್ಕರೆ ೩ ತೊಲ, ಇವುಗಳನ್ನು ಕುಟ್ಟಿ, ಅರೆದು ಸಣ್ಣ ಎಲಚಿಕಾಯಿಯಷ್ಟು ಮಾತ್ರೆಗಳನ್ನುಮಾಡಿಟ್ಟುಕೊಳ್ಳ ಬೇಕು, ಒಂದು ದಿನಕ್ಕೆ ೪-೫ ಮಾತ್ರೆಗಳಂತೆ ಸೇವಿಸುವುದರಿಂದ ಉಷ್ಣದಿಂದ ಅಥವಾ ಶೀತದಿಂದ ಬಂದಿರುವ ನೆಗಡಿಯು ಮತ್ತು ಕೆಮ್ಮಲು ಅವಶ್ಯವಾಗಿ ಗುಣವಾಗುತ್ತದೆ.

೨. ಒಣಗಿದ ಬೀಜದ ದ್ರಾಕ್ಷಿ, ಕೆಂಪು ಚಂದನ, ಚಿರಾಯತ, ಪರ್ಪಾಟಕ, ಅಮೃತಬಳ್ಳಿ, ಧನಿಯಾ, ಲೋಧ್ರದ ಚಕ್ಕೆ, ನೆಲ್ಲಿಚೆಟ್ಟು, ಮುಡಿವಾಳ,ಆಡುಸೋಗೆ, ಅತಿಮಧುರ, ಇವುಗಳೆಲ್ಲಾ ಸೇರಿ ೨ ತೊಲ ದಷ್ಟನ್ನು ಅರ್ಧಸೇರು ನೀರಿನಲ್ಲಿ ಕುಟ್ಟಿಹಾಕಿ ಕುದಿಸಿ ಅರ್ಧ ಚಟಾಕಿಗೆ ಕಷಾಯವನ್ನಿಳಿಸಿಕೊಂಡು ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಕುಡಿಯುವುದರಿಂದ ಪಿತ್ತಜ್ವರ, ಬಾಯಾರಿಕೆ, ಭ್ರಮೆ, ವಾಂತಿ, ಕೆಮ್ಮಲು, ಬಾಯಿ ಒಣಗುವುದು, ಇವೆಲ್ಲವೂ ನಾಶವಾಗುತ್ತವೆ. ಇದು ಒಂದು ಹೊತ್ತಿನ ಅಳತೆ.

೩. ಒಣಗಿದ ದ್ರಾಕ್ಷಿ, ಕಚೋರ, ಮರದರಶಿನ, ಶುಂಠಿ, ಏಲಕ್ಕಿ, ಚಿರಾಯಿತ, ದೇವದಾರು, ಅಮೃತಬಳ್ಳಿ, ಬೇವಿನಚಕ್ಕೆ, ಕರ್ಕಾಟಕ ಶೃಂಗಿ, ಓಮ, ಹಿಪ್ಪಲಿ, ಇವುಗಳನ್ನು ಮೇಲಿನ ಕಷಾಯ ದಂತೆ ಮಾಡಿ ಸೇವಿಸಿದರೆ ಸಕಲವಿಧ ಜ್ವರಗಳೂ ನಾಶವಾಗುತ್ತವೆ.

೪. ಒಂದು ದ್ರಾಕ್ಷಿಯನ್ನು ತೆಗೆದುಕೊಂಡು ಅದರ ಬೀಜ ವನ್ನು ತೆಗೆದುಹಾಕಬೇಕು, ಆ ದ್ರಾಕ್ಷಿಯೊಳಗೆ ೧ ಗುರುಗಂಜಿಯಷ್ಟು ದಾಲಚೀನಿ, ೧ ಗುರುಗಂಜಿಯಷ್ಟು ಕರ್ಕಾಟಕ ಶೃಂಗಿ, ಇವೆರಡನ್ನೂ ತುಂಬಿ ಕೆಮ್ಮುತ್ತಿರುವ ಮಗುವಿಗೆ ನಿತ್ಯದಲ್ಲಿ ತಿನ್ನಿಸಿದರೆ ಸಕಲವಿಧ ಕೆಮ್ಮುಗಳು ಖಂಡಿತವಾಗಿ ಗುಣವಾಗುವುವು. ಮತ್ತು ಕಫವು ಸೇರುವುದರಿಂದ ಗರ್‌ಗರ್ ಶಬ್ದವಾಗುತ್ತಿರುವುದೂ ನಿಂತುಹೋಗುವು ದಲ್ಲದೆ ಕಫದ ಕೆಮ್ಮು ಪೂರ್ತಿಯಾಗಿ ನಿಲ್ಲುತ್ತದೆ. ಈ ಔಷಧವು ವಿಶೇಷ ಗುಣಕಾರಿಯಾಗಿರುತ್ತದೆ.

ಅನೇಕ ಸಲ ಪರೀಕ್ಷಿಸಲ್ಪಟ್ಟಿದೆ.

೫. ಎರಡು ತೊಲ ದ್ರಾಕ್ಷಿಯ ಎಲೆಗಳನ್ನು ಒಂದು ಪಾವು ನೀರಿನಲ್ಲಿ ಕುದಿಸಿ ಅರ್ಧನೀರು ನಿಂತಮೇಲೆ ಶೋಧಿಸಿ ಎರಡು ತೊಲ ಕಲ್ಲುಸಕ್ಕರೆಯನ್ನು ಹಾಕಿ ಕುಡಿದರೆ ಮೂತ್ರಕಟ್ಟು, ಮೂತ್ರದ ಹರಳು ಮೂತ್ರ ಕೋಶದ ವಿಕಾರ, ಇವುಗಳೆಲ್ಲವೂ ನಾಶವಾಗುವುವು.

೬. ದ್ರಾಕ್ಷಿಯ ಮೃದುವಾದ ಎಲೆ ೧೪॥ ತೊಲ, ಬೀಜದ ದ್ರಾಕ್ಷಿ (ಒಣಗಿರುವುದು) ೫ ತೊಲ, ನೆಗ್ಗಲಿ ಮುಳ್ಳು ೪ ತೊಲ, ಕರಬೂಜದ ಬೀಜ ೧ ತೊಲ, ಸೌಂಪು ೧ ತೊಲ, ಕಿರುಕ ಸಾಲೆ ಬೇರು ೧ ತೊಲ, ಇವುಗಳನ್ನೆಲ್ಲಾ ಕುಟ್ಟಿ, ೫ ಸೇರು ನೀರಿನಲ್ಲಿ ೨೪ ಗಂಟೆಗಳ ಕಾಲ ನೆನೆಹಾಕಿರಬೇಕು, ಅನಂತರ ಪ್ರಾತಃ ಕಾಲದಲ್ಲಿ ಅದನ್ನು ಕುದಿಸಬೇಕು, ಒಂದೂಕಾಲು ಸೇರು ನೀರು ಉಳಿದನಂತರ ಕಿವಿಚಿ ಶೋಧಿಸಿಕೊಳ್ಳಬೇಕು. ಈ ಕಷಾಯಕ್ಕೆ ೨॥ ಪೌಂಡು ಕಲ್ಲು ಸಕ್ಕರೆಯನ್ನು ಹಾಕಿ ಕಾಯಿಸಬೇಕು, ತರಬತ್ತಿನ ಪಾಕವು ಒಂದನಂತರ ಒಲೆಯಿಂದ ಇಳಿಸಿ ಶೋಧಿಸಿಕೊಳ್ಳಬೇಕು. ಈ ತರಬತ್ತನ್ನು ಪ್ರಾತಃಕಾಲ ಸಾಯಂಕಾಲಗಳಲ್ಲಿ ಎರಡೆರಡು ತೊಲದಂತೆ ಸೇವಿಸಿದರೆ ಅತ್ಮರೀರೋಗ ಮತ್ತು ಮೂತ್ರ ಸಂಬಂಧವಾದ ತೊಂದರೆಗಳು ಶಾಂತವಾಗುವುವು.

೭. ಎರಡು ತೊಲ ದ್ರಾಕ್ಷಿಯ ಎಲೆಗಳನ್ನು ಒಂದು ಪಾವು ನೀರಿನಲ್ಲಿ ಕುದಿಸಿ ಅರ್ಧ ನೀರು ನಿಂತಮೇಲೆ ಶೋಧಿಸಿ ೨ ತೊಲ ಸಕ್ಕರೆಯನ್ನು ಕೂಡಿಸಿ ಕುಡಿಯುವುದರಿಂದ ಕಟ್ಟುಮೂತ್ರ, ಮೂತ್ರದ ಕಲ್ಲು, ಉರಿಮೂತ್ರ ಮುಂತಾದ ಮೂತ್ರಸಂಬಂಧವಾದ ಎಲ್ಲಾ ರೋಗಗಳು ನಿರ್ಮೂಲವಾಗುವುದು ಖಂಡಿತವೆಂದು "ಹಕೀಮ್ ಜಕರಿಯಾ" ಎಂಬುವರು ಬರೆದಿದ್ದಾರೆ. ಪರೀಕ್ಷಿಸಲ್ಪಟ್ಟಿದೆ.

---

**ಬಾಳೆಯಹಣ್ಣು**—ಶೀತಗುಣವುಳ್ಳುದು, ರುಚಿಯಲ್ಲಿ ಮತ್ತು ಪಾಕದಲ್ಲಿ ಸಿಹಿ, ಬಲಕರ, ಪುಷ್ಟಿಕರ, ಹಸಿವನ್ನು ಕಡಿಮೆ ಮಾಡುವುದು ಮತ್ತು ಬಾಯಾರಿಕೆ-ಕಣ್ಣಿನ ರೋಗ-ಮೇಹರೋಗ, ಇವುಗಳನ್ನು ನಿವಾರಿಸಿ ಮಾಂಸವನ್ನು ಬೆಳೆಸುತ್ತದೆ. ಕಾಯಿಯು-ಸಿಹಿ, ಶೀತಕರ, ಹೊಟ್ಟೆಯನ್ನು ಬಿಗಿಯುವುದು, ಬೇಗನೆ ಪಚನವಾಗದಿರುವುದು, ಕಫನಾಶಕ

ಮತ್ತು ರಕ್ತಪಿತ್ತ-ಬಾಯಾರಿಕೆ-ಉರಿ-ಕ್ಷಯ-ವಾಯು ಇವುಗಳನ್ನು ಜಯಿಸುವುದಲ್ಲದೆ, ಗಾಯಹೊಂದಿದವರಿಗೆ ಹಿತಕರವಾಗಿರುತ್ತದೆ.

ಬಾಳೆಯಹಣ್ಣು ಎಲ್ಲಾವಿಧದ ಬಾವುಗಳಿಗೂ ವಿಶೇಷ ಗುಣಕಾರಿಯಾಗಿದೆ. ಕರಳುಗಳ ಬಾವಿನ ಮೇಲೆ ಇದು ಬಹಳ ಗುಣಕಾರಿಯಾಗಿದೆ. ಬಾಳೆಯ ಹಣ್ಣು ಮಾಗದೆ ಇದ್ದರೆ, ಅಥವಾ ಬಹಳ ಹೆಚ್ಚಾಗಿ ಮೆತ್ತಗಾಗುವ ವರೆಗೆ ಮಾಗಿದ್ದರೆ, ಅದನ್ನು ತಿನ್ನಬಾರದು ಸುಪಕ್ವವಾಗಿರುವ ಹಣ್ಣೇ ತಿನ್ನಲು ಯೋಗ್ಯವಾದುದು. ಇದರಲ್ಲಿ ಸೇಕಡಾ ೯೫ ರಷ್ಟು ಪೌಷ್ಟಿಕ ತತ್ವವಿದೆ. ಸುಪಕ್ವವಾಗಿರುವ ಬಾಳೆಯ ಹಣ್ಣನ್ನು ಸುಲಿದು ಅದರ ಮೇಲಿರುವ ಎಳೆಗಳನ್ನು ತೆಗೆದುಹಾಕಬೇಕು. ಅನಂತರ ಸಣ್ಣಗೆ ಚೂರುಮಾಡಿ, ಒಂದು ಪಾತ್ರೆಯಲ್ಲಿ ಹಾಕಿ, ಬೇಳೆಯನ್ನು ಮಸೆಯುವ ಗುಂಡಿನಿಂದ ಚೆನ್ನಾಗಿ ಮಸೆದು ಹಾಲಿನ ಕೆನೆಯಂತೆ ಮಾಡಿಕೊಳ್ಳಬೇಕು. ಕರಳುಗಳ ಬಾವು ಹೆಚ್ಚಾಗಿದ್ದರೆ ಇದನ್ನು ಯಥೇಷ್ಟವಾಗಿ ಉಪಯೋಗಿಸಬಹುದು. ಬೇಕಾದರೆ ಸ್ವಲ್ಪ ನಿಂಬೆಯ ಹಣ್ಣಿನ ರಸವನ್ನೂ ಹಾಕಬಹುದು. ಸುಪಕ್ವವಾದ ಹಣ್ಣು ಸಕಾಲಕ್ಕೆ ಸಿಗದಿದ್ದರೆ ಸ್ವಲ್ಪ ಮಾಗಿರುವ ಹಣ್ಣನ್ನೇ ಸಿಪ್ಪೆಸಹಿತವಾಗಿ ೨೦-೩೦ ನಿಮಿಷಗಳ ವರೆಗೆ ಬಿಂಬೂದಿಯಲ್ಲಿ ಇಟ್ಟಿದ್ದು ಅನಂತರ ಉಪಯೋಗಿಸಬಹುದು ಆದರೆ ಸುಪಕ್ವವಾದ ಹಣ್ಣಿನಷ್ಟು ಗುಣಕರವಲ್ಲ.

ಸ್ತ್ರೀಯರ ಶ್ವೇತಪ್ರದರ (ಬಿಳುಪು) ರೋಗಕ್ಕೆ ಮತ್ತು ಮೇಹಜಾಡ್ಯಕ್ಕೆ ಈ ಕೆಳಗಿನ ಪ್ರಯೋಗವು ಬಹಳ ಹಿತಕಾರಿಯಾಗಿರುತ್ತದೆ.

೧. ಕಲ್ಲುಸಕ್ಕರೆ, ಹಸುವಿನ ತುಪ್ಪ, ಬಾಳೆಯಹಣ್ಣು ಈ ಮೂರನ್ನೂ ಒಂದೊಂದು ಪಾವಿನಂತೆ ಕೂಡಿಸಿ ಮಂತಿನಿಂದ ಚೆನ್ನಾಗಿ ಕಡೆಯಬೇಕು, ಇದರಲ್ಲಿ ಒಂದೂವರೆ ತೊಲ ವಾಲಚೀನಿ, ಒಂದು ತೊಲ ಲೋಧ್ರದ ಚಕ್ಕೆ, ಆರೆಹೂವು, ಕಾಡು ಏಲಕ್ಕಿಕಾಳು ಅರ್ಧ ಅರ್ಧ ತೊಲ, ತುಂಠಿ ||| ತೊಲ, ಮಾಪಾಳದ ಕಾಯಿ ಕಾಲು ತೊಲ, ಇವುಗಳನ್ನು ನುಣ್ಣಗೆ ಚೂರ್ಣಮಾಡಿ ಕೂಡಿಸಬೇಕು. ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ೧ ರಿಂದ ೨ ತೊಲಗಳವರೆಗೆ ಸೇವಿಸಬೇಕು.

ಬಾಳೆಯ ಹಣ್ಣಿನಲ್ಲಿ ಕಬ್ಬಿಣದ ಅಂಶವು ಇರುವುದರಿಂದ ಪಾಂಡುರೋಗಕ್ಕೆ ಬಹಳ ಗುಣಕಾರಿಯಾಗಿದೆ. ಬಾಳೆಯ ಹಣ್ಣನ್ನುಕಿತ್ತಳೆಯ

ತಸದೊಡನೆ ಸೇವಿಸಿದರೆ ಈ ರೋಗಕ್ಕೆ ಬಹಳ ಪ್ರಯೋಜನವಾಗುತ್ತದೆ. ಏಟು ತಗಲಿದ ಸ್ಥಳ ಮತ್ತು ತರಚಿಕೊಂಡಿರುವ ಸ್ಥಳಕ್ಕೆ ಇದರ ಸಿಪ್ಪೆಯನ್ನು ಕಟ್ಟಿದರೆ ಊತವು ಹೆಚ್ಚಾಗುವುದಿಲ್ಲ.

ಇಂಗ್ಲೆಂಡಿನ ಒಬ್ಬ ಲೇಡಿ ಡಾಕ್ಟರ್ ಈ ರೀತಿಯಾಗಿ ಬರೆದಿರುತ್ತಾಳೆ.‘‘ಒಂದು ರಾತ್ರಿಯಲ್ಲಿ ನಾನು ಒಬ್ಬ ಶೂಲರೋಗಿಣಿಯ ಚಿಕಿತ್ಸೆಗಾಗಿ ಹೋಗಬೇಕಾಯಿತು ಹೋಗುವಾಗ ಬಾರ್ಲಿಯ ಗಂಜಿ, ಕೆಲವು ಬಾಳೆಯ ಹಣ್ಣುಗಳು, ಮತ್ತು ಎನಿಮಾ, ಇವುಗಳನ್ನು ಸಂಗಡ ತೆಗೆದುಕೊಂಡು ರೋಗಿಣಿಯ ಮನೆಗೆ ಹೋಗಿ ನೋಡಲಾಗಿ ಆ ಹುಡುಗಿಯು ಭೋರಲಾಗಿ ಮಲಗಿ ಕಿರುಚಿಕೊಳ್ಳುತ್ತ ಸಹಿಸಲಾರದ ಹಿಂಸೆಯನ್ನು ಅನುಭವಿಸುತ್ತಿದ್ದಳು, ಆಗ ನಾನು ಮೊದಲು ಬಿಸಿನೀರಿನ ಎನಿಮಾಕೊಟ್ಟೆನು, ಒಂದು ಪಾಯಿಂಟ್ ಬಿಸಿನೀರು ಸೇರಿಸಲ್ಪಟ್ಟಿತು. ಕರುಳುಗಳನ್ನು ತೊಳೆದುಕೊಂಡು ನೀರು ಹೊರಗೆ ಬಂದಮೇಲೆ ಬಾರ್ಲಿಯ ನೀರನ್ನು ಬಿಸಿಮಾಡಿದೆನು, ಬಾಳೆಯ ಹಣ್ಣನ್ನು ಮಸೆದು ಕೆನೆಯಂತೆ ಮಾಡಿಕೊಂಡೆನು ಮತ್ತು ಇದನ್ನು ಬಾರ್ಲಿಯ ನೀರಿನೊಳಗೆ ಕೂಡಿಸಿದೆನು, ಈ ರೀತಿಯಾಗಿ ಪೌಷ್ಟಿಕ ಮತ್ತು ಶಾಂತಿಪ್ರದವಾದ ದ್ರವವನ್ನು ಸಿದ್ಧಮಾಡಿಕೊಂಡೆನು, ಈ ದ್ರವವು ಕರುಳಿಗೆ ಸಾವಧಾನದಿಂದ ಸೇರಿಸಲ್ಪಟ್ಟು, ಅದು ಬಹಳ ಹೊತ್ತಿನವರೆಗೆ ಕರುಳಿನ ಸ್ಥಾನದಲ್ಲಿಯೇ ನಿಲ್ಲುವಂತೆ ಯತ್ನವನ್ನು ಮಾಡಿದ್ದಾಯಿತು. ಇದರಿಂದ ಅತ್ಯಾಶ್ಚರ್ಯಕರವಾದ ಪರಿಣಾಮವುಂಟಾಯಿತು. ನೋವು ಆ ಕೂಡಲೇ ನಿಂತುಹೋಯಿತು ಹುಡುಗಿಯ ಪ್ರಾಣವು ಉಳಿಯಿತು.’’

೨. ಸುಪಕ್ವವಾಗಿರುವ ಒಂದು ಹಣ್ಣನ್ನು ತೆಗೆದುಕೊಂಡು ಒಂದು ಕಡೆಯ ಸಿಪ್ಪೆಯನ್ನು ಮಾತ್ರ ಸುಲಿದು ಒಂದು ಹಿಪ್ಪಲಿಯನ್ನಾಗಲಿ ಅಥವಾ ಐದು ಮೆಣಸುಗಳನ್ನಾಗಲಿ ಹಣ್ಣಿನ ಒಳಗಡೆ ಅದುಮಿ ಸಿಪ್ಪೆಯನ್ನು ಮುಚ್ಚಿಬಿಡಿ ಅನಂತರ ಆ ಹಣ್ಣನ್ನು ರಾತ್ರಿಯಲ್ಲಿ ಮಂಜು ಬೀಳುವ ಕಡೆ ಇಟ್ಟಿದ್ದು, ಸೂರ್ಯೋದಯಕ್ಕೆ ಮೊದಲು ಸಿಪ್ಪೆಯನ್ನು ಸುಲಿದು, ಮೊದಲು ಹಿಪ್ಪಲಿ ಅಥವಾ ಮೆಣಸುಗಳನ್ನು ತಿಂದು ಅನಂತರ ಬಾಳೆಯಹಣ್ಣನ್ನೂ ತಿಂದುಬಿಡಿ. ಇದರಿಂದ ವಾಯು

ವಿನ ಪ್ರಕೋಪದಿಂದುಂಟಾದ ಮತ್ತು ಪಿತ್ತದ ಪ್ರಕೋಪದಿಂದುಂಟಾದ ಕೆಮ್ಮಲು ಗುಣವಾಗುತ್ತದೆ. ಪರೀಕ್ಷಿಸಲ್ಪಟ್ಟಿದೆ.

೩. ಬಾಳೆಯ ಹಣ್ಣನ್ನು ಸಕ್ಕರೆ, ಜೇನುತುಪ್ಪ, ತುಪ್ಪ, ಇವುಗಳೊಡನೆ ಸೇವಿಸುತ್ತಿದ್ದರೆ, ಬಹುದಿನದ ಕೆಮ್ಮಲು, ಎದೆಯನೋವು, ದಮ್ಮು, ಇವುಗಳು ಶಾಂತವಾಗುತ್ತವೆ.

೪. ಕೆಲವು ಬಾಳೆಯ ಎಲೆಗಳನ್ನು ತಂದು ಸುಟ್ಟು ಬೂದಿಯನ್ನು ಮಾಡಿರಿ, ಆ ಬೂದಿಯಲ್ಲಿ ಸ್ವಲ್ಪ ಸೈಂಧವಲವಣವನ್ನು ಕೂಡಿಸಿ ಒಂದು ದಿನದಲ್ಲಿ ನಾಲ್ಕಾರು ಸಲದಂತೆ ಸೇವಿಸಿರಿ. ಇದರಿಂದ ಶ್ಲೇಷ್ಮದ ಆಧಿಕ್ಯದಿಂದುಂಟಾಗಿರುವ ಕೆಮ್ಮಲು ದೂರವಾಗುತ್ತದೆ.

೫. ಸಿಪ್ಪೆಯನ್ನು ಸುಲಿದ ಬಾಳೆಯ ಹಣ್ಣನ್ನು ಕೈಯಿಂದ ಕಿವಿಚಿ ಕೆಸರಿನಂತೆ ಮಾಡಿ ಸುಟ್ಟಗಾಯಕ್ಕೆ ಕೂಡಲೇ ಕಟ್ಟಿದರೆ ಗಾಳಿಯ ಪ್ರಭಾವವು ಗಾಯದ ಮೇಲೆ ಬೀಳುವುದಿಲ್ಲ ಮತ್ತು ಆ ಕೂಡಲೇ ಉರಿಯೂ ಶಾಂತವಾಗುತ್ತದೆ.

೬. ಬಾಳೆಯಹಣ್ಣಿನ ಸಿಪ್ಪೆಯನ್ನು ಸ್ವಲ್ಪ ತೆಗೆದು ಆ ಭಾಗದಲ್ಲಿ ಕೆಲವು ಮೆಣಸುಗಳನ್ನಿಟ್ಟು ಅದನ್ನು ರಾತ್ರಿ ಮಂಜಿನಲ್ಲಿಟ್ಟಿದ್ದು ಪ್ರಾತಃಕಾಲದಲ್ಲಿ ಆ ಮೆಣಸುಗಳನ್ನು ಸ್ವಲ್ಪ ಹುರಿದು ತಿಂದುಬಿಡಿ ಈ ಉಪಾಯದಿಂದ ಉಬ್ಬಸವು ಶಾಂತವಾಗುತ್ತದೆ.

೭. ಬಾಳೆಯ ಹೂವು,ಮಲ್ಲಿಗೆಯ ಹೂವು, ತುಲಸಿಯ ಎಲೆ, ಹಿಪ್ಪಲಿ, ಇವುಗಳನ್ನು ಸಮಭಾಗದಿಂದ ಅರೆದು ಅಕ್ಕಿತೊಳೆದ ನೀರಿನಲ್ಲಿ ಕುಡಿದರೆ ಉಬ್ಬಸವು ಕ್ರಮದಿಂದ ಶಾಂತವಾಗುತ್ತದೆ.

೮. ಕಾಡುಬಾಳೆಯ ಎಲೆಯನ್ನು ಸುಟ್ಟು ಬೂದಿಮಾಡಿ ಎರಡಾಣೆತೂಕ ಈ ಬೂದಿಯನ್ನು ಜೇನುತುಪ್ಪದೊಡನೆ ಸೇವಿಸಿದರೆ ಬಿಕ್ಕಳಿಕೆಯು ನಿಂತು ಹೋಗುತ್ತದೆ. ಯಾವ ಔಷಧವನ್ನೇ ಆಗಲಿ ಒಂದೆರಡು ಸಲ ಮಾತ್ರ ಸೇವಿಸಿ ಗುಣವನ್ನು ನಿರೀಕ್ಷಿಸಿ, ಅದು ದೊರೆಯದಿದ್ದರೆ ತಮ್ಮ ಆಲಸ್ಯ ಮತ್ತು ಚಾಂಚಲ್ಯವನ್ನು ಮುಚ್ಚಿ ಪ್ರಾಣ ರಕ್ಷಕಗಳಾದ ನಮ್ಮ ಜನ್ಮಭೂಮಿಯ ಮೂಲಿಕೆಗಳನ್ನು ದೂಷಿಸುವುದು ಉಚಿತವಲ್ಲವೆಂಬ ಮಾತನ್ನು ನೆನಪಿನಲ್ಲಿಟ್ಟು, ಪ್ರತಿಯೊಂದು ಔಷಧವನ್ನೂ ಕಡೆಯ ಪಕ್ಷಕ್ಕೆ ಒಂದು ವಾರದ ವರೆ

ಕಾದರೂ ಗಟ್ಟಿ ಮನಸ್ಸಿನಿಂದ ಸೇವಿಸಿ ಪರೀಕ್ಷಿಸುವುದು ಪ್ರಾಜ್ಞ ರಾದವರ ಮುಖ್ಯಕಾರ್ಯವಾಗಿದೆ.

೯. ಬಾಳೆಯ ಗಿಡದ ರಸದಲ್ಲಿ ಆಶ್ಚರ್ಯಕರವಾದ ವಿಷ ನಾಶಕ ಶಕ್ತಿಯು ಇರುತ್ತದೆ. ಯಾರಿಗಾದರೂ ಹಾವು ಕಡಿದರೆ ಆ ಕೂಡಲೇ ಹಗ್ಗ ಅಥವಾ ಸಮಯಕ್ಕೆ ಸಿಕ್ಕಿದ ಯಾವುದಾದರೊಂದು ವಸ್ತುವಿನಿಂದ, ವಿಷವು ರಕ್ತದೊಡನೆ ಸೇರಿ ಮೇಲಕ್ಕೇರದಿರುವುದಕ್ಕಾಗಿ ಕಡಿದ ಸ್ಥಳಕ್ಕಿಂತ ಸ್ವಲ್ಪ ಮೇಲಕ್ಕೆ ಬಿಗಿಯಾಗಿ ಬಿಗಿದು ಬಿಡಿ. ಈ ಕೆಲಸಕ್ಕೆ ಬೇಕಾಗುವುದನ್ನು ಹುಡುಕಲು ಮಾತ್ರ ಹೋಗಬೇಡಿ ಯಾವುದೂ ಅಲ್ಲಿಯೇ ಸಿಗದಿದ್ದರೆ ನೀವು ಧರಿಸಿರುವ ಬಟ್ಟೆಯನ್ನೇ ಸೀಳಿ ಉಪಯೋಗಿಸಿಕೊಳ್ಳಿ. ಒಬ್ಬನ ಪ್ರಾಣವನ್ನುಉಳಿಸುವುದಕ್ಕಾಗಿ ಉಪಯುಕ್ತವಾದ ವಸ್ತುವಿನ ಜನ್ಮವು ಸಾರ್ಥಕವಾಗುವುದಲ್ಲವೆ? ಹೀಗೆ ಕಟ್ಟನ್ನು ಬಿಗಿದ ನಂತರ ಹಾವು ಕಚ್ಚಿರುವ ಭಾಗವನ್ನು ಸಾಧ್ಯವಾದರೆ "ಪೊಟಾಸಿಯಂ ಪರ್‌ಮಾಂಗ್‌ನೆಟ್" ಹಾಕಿ ಕರಗಿಸಿರುವ ನೀರಿನಲ್ಲಿ ಮುಳುಗಿಸಿಟ್ಟಿರಿ, ಮುಳಗಿಸಲು ಆಗದಂತಹ ಭಾಗಕ್ಕೆ ಬಟ್ಟೆಯನ್ನು ಆ ನೀರಿನಲ್ಲಿ ತೋಯಿಸಿ ತೋಯಿಸಿ ಹಿಂಡುತ್ತಿರಿ, ಈ ಔಷಧಿಯು ಎಲ್ಲಿಯೂ ಸಿಗದಿದ್ದರೆ ಕಡಿದಿರುವ ಭಾಗವನ್ನು ಚಾಕಿನಿಂದ ಸ್ವಲ್ಪ ಸೀಳಿ ಅಲ್ಲಿಯ ರಕ್ತವನ್ನು ತೆಗೆಯಿರಿ ಮತ್ತು ಆ ಭಾಗವನ್ನು ಬಿಸಿನೀರಿನಿಂದ ಒಂದೇ ಸಮನೆ ತೊಳೆಯುತ್ತಿರಿ, ಈ ಕಡೆಗೆ ಬಾಳೆಯಗಿಡವನ್ನು ಕಡಿದು ದಪ್ಪಗಿರುವ ಭಾಗದಿಂದ ರಸವನ್ನು ತೆಗೆದು ಎರಡೆರಡು ಚಮಚದಷ್ಟನ್ನು ೫-೫ ನಿಮಿಷಗಳಿಗೊಂದೊಂದು ಸಲ ಕುಡಿಸುತ್ತಿರಿ. ಇದರಿಂದ ಹಾವಿನ ವಿಷವು ಇಳಿದು ಅನೇಕರ ಪ್ರಾಣವು ಉಳಿದಿರುತ್ತದೆಂದು ಲಾಹೋರಿನ ಒಬ್ಬ ಅನುಭವಿಗಳಾದ ವೈದ್ಯವಿದ್ವಾಂಸರು ಹೇಳಿರುತ್ತಾರೆ ಮತ್ತು ಇಂಗ್ಲೆಂಡಿನ ಒಂದು ಪ್ರಸಿದ್ಧವಾದ ವರ್ತಮಾನ ಪತ್ರಿಕೆಯಲ್ಲಿ "ಬಾಳೆಗಿಡದ ರಸವನ್ನು ಕುಡಿಸುವುದರಿಂದ ಭಯಂಕರವಾದ ಘೋರ ಸರ್ಪದ ವಿಷವು ನಿವಾರಣೆಯಾಗುತ್ತದೆ. ಅನೇಕರಿಗೆ ಈ ರಸದಿಂದ ಪ್ರಾಣರಕ್ಷಣೆಯಾಗಿದೆ" ಎಂಬ ವಿಷಯವು ಪ್ರಕಟವಾಗಿದ್ದಿತೆಂದೂ ಆ ಪಂಡಿತರೇ ಹೇಳಿರುವರು.

೧೦. ಬಾಳೆಯ ಕಂಭದೊಳಗಿನ ಬಿಳಿಯ ದಿಂಡನ್ನು ಒಣಗಿಸಿ ಕುಟ್ಟಿ ಶೋಧಿಸಿಕೊಳ್ಳಬೇಕು, ಈ ಚೂರ್ಣವನ್ನು ಅರ್ಧ ತೊಲದಿಂದ ಒಂದು ತೊಲದ ವರೆಗೆ ತಿಂದು ಒಂದು ಲೋಟ ತಣ್ಣೀರನ್ನು ಕುಡಿಯಬೇಕು. ಸಕಲವಿಧ ಮೇಹ ಜಾಡ್ಯವೂ ನಾಶವಾಗುತ್ತದೆ.

೧೧. ಬಾಳೆಯಹಣ್ಣು, ನೆಲ್ಲಿಕಾಯಿಯ ರಸ, ಜೇನುತುಪ್ಪ, ಸಕ್ಕರೆ, ಇವುಗಳನ್ನು ಒಟ್ಟಾಗಿ ಸೇರಿಸಿ ಸೇವಿಸುವುದರಿಂದ ಸ್ತ್ರೀಯರ ಸಕಲವಿಧ ಪ್ರದರರೋಗವು ಮತ್ತು ಸೋಮರೋಗವು (ವಾಸನೆಯಿಲ್ಲದ ಬಿಳಿಯ ದ್ರವವು ಸ್ರವಿಸುತ್ತಿರುವುದು) ನಿವಾರಣೆಯಾಗುತ್ತದೆ.

ಅಂಜೂರ ಹಣ್ಣು—ಅತಿಶೀತಲ, ಪಿತ್ತನಾಶಕ, ತಲೆಯಲ್ಲಿ ಉಂಟಾಗುವ ವಿಕಾರಗಳಿಗೂ, ಕುಷ್ಠರೋಗಿಗಳಿಗೂ ವಿಶೇಷ ಲಾಭವನ್ನೀಯುವುದು ಮತ್ತು ಶ್ವಾಸನಾಳ-ಎದೆ-ಮೂತ್ರಾಶಯ-ಕರಳು ಇವುಗಳಿಗೆ ಬಲವನ್ನಿತ್ತು, ಕ್ಷಯ-ಕೆಮ್ಮು-ಅಜೀರ್ಣ-ಶ್ಲೇಷ್ಮ ಇವುಗಳನ್ನು ಶಾಂತಗೊಳಿಸಿ ಶುದ್ಧರಕ್ತವನ್ನುಂಟುಮಾಡುವುದಾಗಿದೆ. ಈ ಹಣ್ಣುಗಳನ್ನು ಕಿವಿಚಿ ಕೀವಾಗಿರುವ ಗಡ್ಡೆಗಳಿಗೆ ಕಟ್ಟುವುದರಿಂದ ಗಡ್ಡೆಗಳು ಜೀಗನೆ ಒಡೆಯುತ್ತವೆ. ಇದರ ಎಲೆಯ ರಸವನ್ನು ಹಚ್ಚುವುದರಿಂದ ಕುಷ್ಠರೋಗದ ಪ್ರಾರಂಭದಶೆಯಲ್ಲಿ ವಿಶೇಷ ಲಾಭವುಂಟಾಗುವುದು.

ಹೊಸ ಅಂಜೂರವು ಪುಷ್ಟಿಕರವಾದುದು. ಒಣಗಿದ ಅಂಜೂರವನ್ನು ತಿನ್ನಬೇಕಾದರೆ ಬಿಸಿನೀರಿನಿಂದ ಅಂಜೂರವನ್ನು ತೊಳೆದು ಅನಂತರ ಇಪ್ಪತ್ತು ನಿಮಿಷಗಳ ವರೆಗೆ ಹಬೆಯಿಂದ ಬಿಸಿಮಾಡಿ ತಿನ್ನುವುದುತ್ತಮ.

ಹೊಟ್ಟೆ ತುಂಬುವಷ್ಟು ಅಂಜೂರವನ್ನೇ ಕೆಲವು ದಿನಗಳವರೆಗೆ ತಿನ್ನುತ್ತಿರುವುದರಿಂದ ಬಿಳಿಯತೊನ್ನು ಹಬ್ಬುವುದಿಲ್ಲ. ಮತ್ತು ದಿನ ಕ್ರಮದಿಂದ ಕಡಿಮೆಯಾಗುತ್ತದೆ ರಕ್ತಶುದ್ಧಿಗಾಗಿ ಅಂಜೂರವು ಬಹಳ ಶ್ರೇಷ್ಠವಾದುದು. ಇದು ಮಲವನ್ನು ಮೆತ್ತಗೆ ಮಾಡಿ ಹೊರಗೆ ತರುವುದಾದುದರಿಂದ ಮಲಬದ್ಧತೆಯವರಿಗೆ ವಿಶೇಷ ಪ್ರಯೋಜನಕಾರಿಯಾಗಿದೆ.

ನಾಗಕೇಸರಿ ೫ ತೊಲ, ಡಾಳೆ ೨॥ ತೊಲ, ದಾಡಿಂಬೆಯ ಮೊಗ್ಗು ೨ ತೊಲ, ಕೊಹಸಿಗೆ ಚಕ್ಕೆ ೨॥ ತೊಲ, ಬಾಲಮೆಣಸು ೨

ತೊಲ, ನೆಲ್ಲಿಚೆಟ್ಟು (ಬೀಜತೆಗೆದು) ೩ತೊಲ, ದಪ್ಪ ಅಳಲೇಕಾಯಿಯ ಸಿಪ್ಪೆ ೨॥ ತೊಲ, ಇವುಗಳನ್ನು ಚೂರ್ಣಿಸಿ ಬಟ್ಟೆಯಿಂದ ಶೋಧಿಸಿ ಕೊಂಡು ಹಸಿಯ ಅಂಜೂರದ ರಸದಲ್ಲಿ ಏಳು ಸಲ ನೆನೆಸಿ ನೆನೆಸಿ ನೆರಳಿನಲ್ಲಿ ಒಣಗಿಸಬೇಕು, ಹಸಿಯದು ಸಿಗದಪಕ್ಷಕ್ಕೆ ಒಣಗಿದ ಅಂಜೂರವನ್ನೇ ೧೦ ತೊಲ ತಂದು ಕುಟ್ಟಿ ಅದರಲ್ಲಿ ಅರ್ಧಸೇರು ನೀರನ್ನು ಹಾಕಿ ಕುದಿಸಬೇಕು, ಅನಂತರ ಕಷಾಯವನ್ನು ಕಿವಿಚಿ ಶೋಧಿಸಿಕೊಂಡು ಆ ರಸದಲ್ಲಿ ಮೇಲಿನಂತೆ ನೆನೆಸಬಹುದು. ಇದಾದನಂತರ ಒಣಗಿದ ಕರೀದ್ರಾಕ್ಷಿ (ಬೀಜವಿರುವುದು) ಯ ಕಷಾಯ ದಲ್ಲಿ ೭ ಸಲ ನೆನೆಸಿ ಒಣಗಿಸಬೇಕು, ಯಾವಾಗ ರಸವೆಲ್ಲಾ ಇಂಗಿ ಹೋಗಿ ಒಣಗುತ್ತದೆಯೋ ಆಗ ಅದನ್ನು ನುಣ್ಣಗೆ ಅರೆದು ೧೪ ತೊಲ ಕಲ್ಲುಸಕ್ಕರೆಯ ಚೂರ್ಣವನ್ನು ಮತ್ತು ೨ ತೊಲ ಬಿದರುಪ್ಪು, ।।। ತೊಲ ಪಚ್ಚೆಕರ್ಪೂರ, ಇವುಗಳನ್ನೂ ಸೇರಿಸಿ ಸೀಸೆಯಲ್ಲಿಟ್ಟು ಕೊಳ್ಳಬೇಕು. ಈ ಚೂರ್ಣವನ್ನು ನಿತ್ಯದಲ್ಲಿ ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಅರ್ಧ ಅರ್ಧ ತೊಲದಂತೆ ಸೇವಿಸಿ ಮೇಲೆ ಒಂದೆರಡು ಗುಟುಕು ನೀರನ್ನು ಕುಡಿಯಬೇಕು ಇದರಿಂದ ಕೆಂಪು, ಬಿಳುಪು, ಹಳದಿ, ಮುಂತಾದ ಬಣ್ಣಗಳ ಪ್ರದರರೋಗವು ಬಹು ಬೇಗನೆ ಶಾಂತವಾಗುತ್ತದೆ. ಸ್ತ್ರೀಯರ ಪ್ರಾಣಕ್ಕೆ ಮೃತ್ಯುವಿನಂತಿರುವ ಈ ರೋಗಕ್ಕೆ ಇದು ಬಹಳ ಗುಣಕಾರಿಯಾಗಿರುತ್ತದೆ

ಎಷ್ಟೋ ಸಲ ಪರೀಕ್ಷಿಸಿರುವುದಾಗಿದೆ.

೧. ಒಣಗಿದ ಅಂಜೂರ ಒಂದು ತೊಲ ಮತ್ತು ಅತಿಮಧುರ ಒಂದು ತೊಲ. ಇವೆರಡನ್ನೂ ಕುಟ್ಟಿ ಅರ್ಧಪಾವು ಹಾಲು ಮತ್ತು ಅರ್ಧಪಾವು ನೀರಿನಲ್ಲಿ ಹಾಕಿ ಕುದಿಸಿರಿ, ನೀರು ಹೋಗಿ ಹಾಲು ಮಾತ್ರ ಉಳಿವಿರುವುದನ್ನು ನೋಡಿ ಇಳಿಸಿ ತಣ್ಣಗಾದನಂತರ ಕಿವಿಚಿ ಶೋಧಿಸಿಕೊಂಡು ಒಂದು ತೊಲ ಕಲ್ಲು ಸಕ್ಕರೆ ಮತ್ತು ಕಾಲು ತೊಲ ಜೇನುತುಪ್ಪವನ್ನು ಕೂಡಿಸಿ ಕುಡಿದುಬಿಡಿ. ಇದರಿಂದ ಅತ್ಯುಷ್ಣ ದಿಂದುಂಟಾಗಿರುವ ಕೆಮ್ಮಲು ಗುಣವಾಗುತ್ತವೆ.

೨. ಒಣಗಿದ ಅಂಜೂರ ೨,ಒಣಗಿದ ಬೀಜದ ದ್ರಾಕ್ಷಿ೭,ಸೌಂಪು ಕಾಲು ತೊಲ, ಸೋನಾಮುಖಿ ಅರ್ಧತೊಲ,ಗುಲಾಬಿ ಹೂವು ಕಾಲು

ತೊಲ, ಇವುಗಳನ್ನು ಸ್ವಲ್ಪ ಕುಟ್ಟಿ ಒಂದು ಸಾವು ನೀರಿನಲ್ಲಿ ಹಾಕಿ ಕುದಿಸಿ ಒಂದು ಚಟಾಕು ನೀರು ಉಳಿದ ಮೇಲೆ ಕಿವಿಚಿ ಶೋಧಿಸಿ ಕೊಂಡು ಕುಡಿಯುವುದರಿಂದ ಒಂದೆರಡು ಭೇದಿಗಳಾಗಿ ಹೊಟ್ಟೆಯು ಸ್ವಚ್ಛವಾಗಿ ನೆಗಡಿಯು ಶಾಂತವಾಗುತ್ತದೆ. ನೆಗಡಿಯ ಜತೆಗೆ ಮಲ ಬದ್ಧತೆಯ ತೊಂದರೆಯೂ ಇರತಕ್ಕವರಿಗೆ ಇದು ಬಹಳ ಲಾಭ ದಾಯಕವಾಗಿರುತ್ತದೆ. ಮೃದುವಾದ ಪ್ರಕೃತಿಯವರು ಸೋನಾಮುಖಿ, ದ್ರಾಕ್ಷಿಗಳನ್ನು ಕಡಿಮೆ ಮಾಡಿಕೊಳ್ಳಬಹುದು. ಗಟ್ಟಿ ಹೊಟ್ಟೆಯವರು ಈ ವಸ್ತುಗಳ ಅಳತೆಯನ್ನು ಹೆಚ್ಚಿಸಿಕೊಳ್ಳಬಹುದು.

---

(ಬೋರೆ) ಎಲಚಿ ಹಣ್ಣು—ಇದರಲ್ಲಿ ದೊಡ್ಡದು ಸಣ್ಣದು, ಬಹಳ ಸಣ್ಣದು ಎಂಬ ಮೂರು ಜಾತಿಗಳಿವೆ; ಅವುಗಳಲ್ಲಿ ದೊಡ್ಡ ಜಾತಿಯ ಹಣ್ಣು ಬಹಳ ಸಿಹಿಯಾಗಿಯೂ, ಶೈತ್ಯಗುಣವುಳ್ಳದಾಗಿಯೂ ವೀರ್ಯವರ್ಧಕ ಮತ್ತು ಪುಷ್ಟಿಕರವಾಗಿಯೂ, ಪಿತ್ತ-ದಾಹ-ರಕ್ತ ವಿಕಾರ-ಕ್ಷಯ-ನೀರಡಿಕೆ ಇವುಗಳನ್ನು ನಿವಾರಿಸುವುದಾಗಿಯೂ ಭೇದಿ ಯನ್ನು ಮಾಡಿಸುವುದಾಗಿಯೂ ಪಿತ್ತವನ್ನು ಹೆಚ್ಚಿಸುವುದಾಗಿಯೂ ಇರುತ್ತದೆ, ಬೇಗನೆ ಪಚನವಾಗುವುದಿಲ್ಲ. ಸಣ್ಣ ಜಾತಿಯ ಹಣ್ಣು, ಉಷ್ಣಗುಣವುಳ್ಳದೂ, ವಾತ ಮತ್ತು ಶ್ಲೇಷ್ಮವನ್ನು ನಿವಾರಿಸುವುದೂ ಭೇದಿಕಾರಿಯೂ, ಪಿತ್ತವರ್ಧಕವೂ ಆಗಿರುತ್ತದೆ. ಬೇಗನೆ ಪಚನ ವಾಗುವುದಲ್ಲ. ಬಹಳ ಸಣ್ಣ ಜಾತಿಯ ಹಣ್ಣು, ಹುಳಿ, ಒಗರು, ಮತ್ತು ಸ್ವಲ್ಪ ಸಿಹಿರಸದಿಂದ ಕೂಡಿದ್ದು ಭೇದಿಕಾರಿಯೂ, ವಾತ ಪಿತ್ತ ನಾಶಕವೂ, ಆಗಿರುತ್ತದೆ. ಬೇಗ ಪಚನವಾಗುವುದಲ್ಲ. ಹಳದಾದ ಮತ್ತು ಒಣಗಿದ ಎಲಚಿಯು ಬಹು ಬೇಗನೆ ಜೀರ್ಣಿಸುವುದೂ, ಅಗ್ನಿ ವರ್ಧಕವೂ, ಆಯಾಸ, ನೀರಡಿಕೆಗಳನ್ನು ಶಾಂತಗೊಳಿಸುವುದೂ ಆಗಿರುತ್ತದೆ. ಸ್ವಲ್ಪ ಪಕ್ವವಾಗಿರುವ ಎಲಚಿಯು, ಪಿತ್ತ ಕಫಗಳನ್ನು ಹೆಚ್ಚಿಸುವುದಾಗಿರುತ್ತದೆ.

ಸಣ್ಣ ಎಲಚಿಹಣ್ಣನ್ನು ಹೆಚ್ಚಾಗಿ ತಿಂದರೆ ಕಾಲರಾ ಬರುತ್ತದೆ ಒಣಗಿದ ಎಲಚಿಯು ತುಂಟತನ ಮತ್ತು ಹದ್ದು ಮೀರುವಿಕೆಗೆ ಉತ್ತಮ ಚಿಕಿತ್ಸೆಯಾಗಿರುತ್ತದೆ. ಇದರ ಪ್ರಭಾವವು ನರಗಳ ಮಂಡ

ಲದ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡುತ್ತದೆ. ನಿಮ್ಮಲ್ಲಿ ಯಾವನಾದರೂ ಹುಡುಗನು ತುಂಟನಾಗಿ, ಹೇಳಿದ ಮಾತನ್ನು ಕೇಳದೆ ಸ್ವೇಚ್ಛಾಚಾರಿಯಾಗಿದ್ದರೆ, ಅವನಿಗೆ ಒಣಗಿದ ಎಲಚಿಯ ಕಷಾಯ ವನ್ನು ಕೊಟ್ಟು ನೋಡಿ! ಹುಡುಗನಲ್ಲಿ ಆಶ್ಚರ್ಯಕರವಾದ ಪರಿ ವರ್ತನೆಯುಂಟಾಗಿ ನಿಮ್ಮ ಆಧೀನನಾಗುತ್ತಾನೆ. ಅವನ ತುಂಟತನ ಮತ್ತು ಮಾತು ಮಾತಿಗೆ ಸಿಡುಕುವಿಕೆ ಎಲ್ಲವೂ ಮಾಯವಾಗುತ್ತವೆ.

೧. ಎಲಚಿಯ ಕಷಾಯ :—ಮೂವತ್ತು ತೊಲ ಒಣಗಿದ ಎಲಚಿಯನ್ನು ರಾತ್ರಿಯಲ್ಲಿ ಒಂದು ಸೇರು ತಣ್ಣೀರಿನಲ್ಲಿ ಹಾಕಿ, ಪ್ರಾತಃಕಾಲ ಆ ಗಡಿಗೆಯನ್ನು ಒಲೆಯಮೇಲಿಟ್ಟು, ಅರ್ಧ ನೀರು ಹೋಗುವ ವರೆಗೆ ಕುದಿಸಬೇಕು. ಅನಂತರ ಕಿವಿಚಿ ಶೋಧಿಸಿ ಕೊಂಡು ಒಂದು ನಿಂಬೆಹಣ್ಣನ್ನು ಹಿಂಡಿ ಕುಡಿಸಿಬಿಡಿ.

೨. ದಪ್ಪಜಾತಿಯ ಎಲಚಿಹಣ್ಣಿನ ರಸವು ಚಳಿಗಾಲದಲ್ಲಿ ನೆಗಡಿ ಮತ್ತು ಕೆಮ್ಮಲಿಗೆ ವಿಶೇಷ ಲಾಭವನ್ನುಂಟುಮಾಡುತ್ತದೆ.

ರಸವನ್ನು ತೆಗೆಯುವ ರೀತಿ:—ಎಲಚಿಯ ಹಣ್ಣನ್ನು ಒರಳಿನಲ್ಲಿ ಹಾಕಿ ಕುಟ್ಟಿ ಸಾವಧಾನವಾಗಿ ಒಂದು ಗಂಟೆಯವರೆಗೆ ಬಿಸಿ ಮಾಡಿರಿ, ಮತ್ತು ದಪ್ಪ ಬಟ್ಟೆಯಲ್ಲಿ ಹಾಕಿ ರಸವನ್ನು ಹಿಂಡಿಕೊಳ್ಳಿ, ಅನಂತರ ಇದನ್ನು ಬೇರೆ ಪಾತ್ರೆಯಲ್ಲಿ ಹಾಕಿ ಒಂದು ಸೇರು ರಸಕ್ಕೆ ೧೦ ತೊಲ ಸಕ್ಕರೆಯನ್ನು ಹಾಕಿ ಕರಗಿಸಿಬಿಡಿ, ರಸವನ್ನು ಒಂದು ಸ್ವಚ್ಛವಾದ ಸೀಸೆಯಲ್ಲಿ ತುಂಬಾ ಹಾಕಿ ಸೀಸೆಯನ್ನು ಬಿಸಿನೀರನ್ನು ಹಾಕಿರುವ ಒಂದು ಪಾತ್ರೆಯಲ್ಲಿ ಇಟ್ಟು ಕಾಲು ಗಂಟೆಯ ವರೆಗೆ ನೀರನ್ನು ಕುದಿಸಿರಿ ಅನಂತರ ಸೀಸೆಯನ್ನು ತೆಗೆದು ಬಿರಟಿನಿಂದ ಚೆನ್ನಾಗಿ ಮುಚ್ಚಿಬಿಡಿ. ಈ ರಸದ ಸೇವನೆಯಿಂದ ಬೆವರು ಬರುತ್ತದೆ. ಆದುದರಿಂದ ನೆಗಡಿಗೆ ಬಹಳ ಗುಣಕಾರಿಯಾಗಿದೆ. ಮಲಗುವಾಗ ಬಿಸಿನೀರಿನೊಡನೆ ಎರಡು ಚಮಚಗಳಷ್ಟನ್ನು ಸೇವಿಸಬಹುದು ಜ್ವರದಲ್ಲಿಯೂ ಬಹಳ ಉಪ ಕಾರವನ್ನುಂಟುಮಾಡುತ್ತದೆ.

೩. ಮೂಲವ್ಯಾಧಿಗೆ ಎಲಚಿ ಎಲೆಯ ಪೋಲ್ಟಿಸ್—ಅದ್ಭುತ ಗುಣಕಾರಿಯಾಗಿದೆ. ಈ ಎಲೆಗಳನ್ನು ತಂದು ಹಬೆಯಲ್ಲಿ ಕುದಿಸ

ಬೇಕು. ಒಂದು ಪಾತ್ರೆಯಲ್ಲಿ ನೀರನ್ನು ಹಾಕಿ ಪಾತ್ರೆಯ ಬಾಯಿಗೆ ಜಲ್ಲಡಿಯನ್ನು ಇಟ್ಟು ಅಥವಾ ಬಟ್ಟೆಯನ್ನಾದರೂ ಕಟ್ಟಿ ಅದರ ಮೇಲೆ ಎಲೆಗಳನ್ನು ಇಟ್ಟು ಬಿಡಿ, ಮೇಲೆ ಒಂದು ತಟ್ಟೆಯನ್ನು ಮುಚ್ಚಿಬಿಡಿ, ಹೀಗೆ ಕುದಿಸಿದ ನಂತರ ಎಲೆಯನ್ನು ತೆಗೆದು ಅದರ ಮೇಲೆ ಅರಳೆಣ್ಣೆಯನ್ನು ಚಿಮುಕಿಸಿ ಮೊಳೆಗಳ ಮೇಲೆ ಒಂದು ಗಂಟೆಯ ವರೆಗೆ ಬಿಸಿಯಾಗಿರುವುದನ್ನೇ ಕಟ್ಟಿರಿ ತಣ್ಣಗಾದ ನಂತರ ತೆಗೆದುಹಾಕಿ ಬಿಡಿ. ನಿಮಗೆ ಎಷ್ಟುಸಲ ಬೇಕಾದರೂ ಇದರಂತೆ ಮಾಡಿ ಕಟ್ಟಿಕೊಳ್ಳಿ.

೪. ಎಲಚಿಹಣ್ಣಿನ ಬೀಜದೊಳಗಿನ ಪೊಪ್ಪು, ಅತಿಮಧುರ ಹಸನಾದ ಕೋಷ್ಟ, ಇವುಗಳನ್ನು ಸಮವಾಗಿ ಸಂಗ್ರಹಿಸಿ ಸೀರಿನೊಡನೆ ಅರೆದು ಹಚ್ಚಿಧರೆ ಮುಡಿಮೆಗಳು ಹೋಗುತ್ತವೆ.

೫. ದಪ್ಪ ಎಲಚಿಹಣ್ಣುಗಳನ್ನು ತಂದು ಒಣಗಿಸಿ ಅವುಗಳನ್ನು ಸುಟ್ಟು ಆ ಬೂದಿಯನ್ನು ನೀರಿನೊಡನೆ ಕಲಿಸಿ ಹಚ್ಚುವುದರಿಂದ ಮುಡಿಮೆಗಳು ನಾತವಾಗುತ್ತವೆ.

೬. ಎಲಚಿಯ ಎಲೆಗಳನ್ನು ಅರೆದು ಕೈಕಾಲುಗಳಿಗೆ ಹಚ್ಚಿ ತಿಕ್ಕುವುದರಿಂದ ಅಂಗೈ ಅಂಗಾಲುಗಳು ಬೆವೆಯುವುದು ನಿಲ್ಲುತ್ತದೆ.

೭. ಎಲಚಿಯ ಗಿಡದ ಎಳೆಯ ಕಾಯಿಗಳನ್ನು ಅಥವಾ ಕೋಮಲವಾಗಿರುವ ಕುಡಿಯನ್ನು ಮೊಸರಿನೊಡನೆ ಅರೆದು ಲೇಪಿಸುತ್ತಿರುವುದರಿಂದ ಸುಟ್ಟಗಾಯವು ಮಾಯುತ್ತದೆ. ಉರಿಯೂ ಕಡಿಮೆಯಾಗುತ್ತದೆ.

೮. ಎಲಚಿಯ ಬೀಜದೊಳಗಿನ ಪೊಪ್ಪು, ಬತ್ತದ ಅರಳು, ಹಿಪ್ಪಲಿ, ಇವುಗಳನ್ನು ಸಮವಾಗಿ ಅರೆದು ಜೇನುತುಪ್ಪದೊಡನೆ ಸೇವಿಸುವುದರಿಂದ ಬಿಕ್ಕಳಿಕೆಯು ನಿಲ್ಲುತ್ತದೆ.

೯. ಎಲಚಿಯ ಎಲೆ ಮತ್ತು ಬೇವಿನ ಎಲೆಗಳನ್ನು ನೀರಿನೊಡನೆ ಅರೆದು ತಲೆಯ ಕೂದಲಿಗೆ ಚೆನ್ನಾಗಿ ಬುಡಕ್ಕೆ ಸೇರುವಂತೆ ತಿಕ್ಕಿ ೨ ಗಂಟೆಗಳಾದ ಮೇಲೆ ತೊಳೆದು ಬಿಡಿ, ಕೂದಲು ೩೧ ದಿನಗಳಲ್ಲಿ ಉದ್ದವಾಗಿ ಬೆಳೆಯುತ್ತವೆ. ಇದನ್ನು ನನ್ನ ಒಬ್ಬ ಕಾಶಿಯ ಸ್ನೇಹಿತರು ಬಹಳ ಹೊಗಳಿರುತ್ತಾರೆ.

೧೦. ಎಲಚಿಯ ಎಲೆಗಳನ್ನು ನೆಲ್ಲಿಕಾಯಿಗಳ ರಸದಲ್ಲಿ ಅರೆದು ನಿತ್ಯದಲ್ಲಿ ಕೂದಲಿಗೆ ಹಚ್ಚಿ ಒಂದು ಗಂಟೆಯಾದ ಮೇಲೆ ತೊಳೆದುಕೊಳ್ಳಬೇಕು. ಇದರಿಂದ ಕೂದಲು ಬೆಳೆಯುತ್ತವೆ.

೧೧. ಸ್ನಾನಮಾಡುವಾಗ ಎಲಚಿಯ ಎಲೆಗಳೊಡನೆ ಎಳ್ಳಿನ ಎಲೆಗಳನ್ನು ಅರೆದು ಕೂದಲಿಗೆ ಹಚ್ಚಿ ತಿಕ್ಕಿ ಸ್ನಾನಮಾಡುವುದರಿಂದ ಕೂದಲು ಉದ್ದವಾಗಿ ಬೆಳೆಯುತ್ತವೆ.

ಇದನ್ನು ಹಳ್ಳಿಯ ನಿವಾಸಿಗಳು ನಿತ್ಯದಲ್ಲಿ ಮಾಡಬಹುದು. ನಗರವಾಸಿಗಳಾದವರು ಹೆಚ್ಚಾಗಿ ಈ ಎಲೆಗಳನ್ನು ತರಿಸಿ ಒಣಗಿಸಿಟ್ಟು ಕೊಂಡು ನೀರಿನಲ್ಲಿ ನೆನೆಸಿ ಅರೆದು ನಿತ್ಯದಲ್ಲಿ ಉಪಯೋಗಿಸಿಕೊಳ್ಳ ಬಹುದು.

೧೨. ಎಲಚಿಗಿಡದ ಹಸಿಯ ಚಕ್ಕೆ, ಗರುಗದ ಸೊಪ್ಪು, ಅಳಲೆಕಾಯಿ, ನೆಲ್ಲಿಚೆಟ್ಟು, ತಾರೆಕಾಯಿ ಮತ್ತು ಕರಿಯ ಮಣ್ಣು ಇವೆಲ್ಲವನ್ನೂ ಸಮವಾಗಿ ತಂದು ಅರೆದು ಕಬ್ಬಿನ ರಸದಲ್ಲಿ ಕೂಡಿಸ ಬೇಕು, ಈ ಕಬ್ಬಿನ ರಸವನ್ನು ಒಂದು ಗಡಿಗೆಯಲ್ಲಿ ಹಾಕಿ ೧ ತಿಂಗಳ ವರೆಗೆ ಭೂಮಿಯಲ್ಲಿ ಹೂಳಿಟ್ಟಿದ್ದು ಅನಂತರ ತೆಗೆದು ಕೂದಲಿಗೆ ಹಚ್ಚುವುದರಿಂದ ಬಿಳಿಯಕೂದಲುಗಳು ಖಂಡಿತವಾಗಿ ಕಪ್ಪಾಗುತ್ತ ವೆಂದು ಕಲ್ಕತ್ತೆಯ ಒಂದು ಬಂಗಾಲಿ ವರ್ತಮಾನ ಪತ್ರದಲ್ಲಿ ಪ್ರಕಟ ವಾಗಿದ್ದಿತು.

೧೩. ದಪ್ಪ ಎಲಚಿಯ ಹಣ್ಣಿನ ಬೀಜದೊಳಗಿನ ಪೊಪ್ಪು ೬ ತೊಲ, ತುಲಸಿಯ ಎಲೆ ೬ ತೊಲ, ಕಲ್ಲುಸಕ್ಕರೆ ೬ ತೊಲ, ಮೆಣಸು ೩ ತೊಲ, ಇವುಗಳನ್ನು ಕುಟ್ಟಿ ನೀರಿನೊಡನೆ ಅರೆದು ಸಣ್ಣ ಎಲಚಿ ಕಾಯಿನಷ್ಟು ದಪ್ಪ ಮಾತ್ರೆಗಳನ್ನು ಮಾಡಿಕೊಂಡು ಒಣಗಿಸಿಟ್ಟು ಕೊಳ್ಳಬೇಕು. ಇದರಲ್ಲಿನ ಒಂದೊಂದು ಮಾತ್ರೆಯನ್ನು ತಿನ್ನುವುದ ರಿಂದ ಬಹಳ ಪುರಾತನವಾದ ವಾಂತಿಯ ರೋಗವು ಗುಣವಾಗುತ್ತದೆ.

---

**ಖರ್ಜೂರ**—ಶೀತಕರ, ಪಾಕದಲ್ಲಿಯೂ, ರುಚಿಯಲ್ಲಿಯೂ ಸಿಹಿಯಾದುದು, ಪುಷ್ಟಿಕರ, ತೃಪ್ತಿಕರ, ಕ್ಷಯ ಮತ್ತು ರಕ್ತಪಿತ್ತವನ್ನು

ನಿವಾರಿಸುವುದಲ್ಲದೆ ಗಾಯಹೊಂದಿದವರಿಗೆ ಹಿತವಾಗಿರುತ್ತದೆ. ಬೇಗನೆ ಪಚನವಾಗುವುದಿಲ್ಲ.

ಅತಿಸಾರ ಮತ್ತು ಸಂಗ್ರಹಣಿ ರೋಗವು ಬಂದಾಗ ಸಿಹಿಯನ್ನು ತಿನ್ನಬೇಕಾದರೆ ಖರ್ಜೂರವನ್ನು ತಿನ್ನುವುದುತ್ತಮ. ಬಹುಮೂತ್ರ ಅಥವಾ ಮಧುಮೇಹ ರೋಗವುಳ್ಳವರಿಗೆ ಸಕ್ಕರೆ ಮತ್ತು ಎಲ್ಲಾ ಸಿಹಿ ಪದಾರ್ಥಗಳೂ ವಿರೋಧವಾಗಿರುತ್ತವೆ. ಆದರೆ ಖರ್ಜೂರದ ಸಿಹಿಯು ಮಾತ್ರ ಯಾವ ತೊಂದರೆಯನ್ನೂ ಕೊಡಲಾರದು. ಇದರ ಶರಬತ್ತನ್ನು ನೀರಿನಲ್ಲಿ ಅಥವಾ ಹಾಲಿನಲ್ಲಿ ಕೂಡಿಸಿ ಸೇವಿಸಬಹುದು.

೧. ಖರ್ಜೂರದ ಶರಬತ್ತು:—ಐದು ಸೇರು ಖರ್ಜೂರವನ್ನು ತಂದು ಬೀಜವನ್ನು ತೆಗೆದುಹಾಕಿ ತೊಳೆಯಬೇಕು. ಅನಂತರ ಸ್ವಲ್ಪ ಕುಟ್ಟಿ ಎಂಟು ಸೇರು ನೀರಿನಲ್ಲಿ ಹಾಕಿ, ನಾಲ್ಕು ಸೇರು ನೀರು ಇಂಗಿದ ಮೇಲೆ ಇಳಿಸಿಕೊಂಡು ಆರಿದನಂತರ ಕಿವಿಚಿ ಶೋಧಿಸಿಕೊಳ್ಳಬೇಕು. ಮತ್ತು ಈ ಶೋಧಿಸಿರುವ ನೀರನ್ನು ಪುನಃ ಒಲೆಯ ಮೇಲಿಟ್ಟು ಕಾಯಿಸಬೇಕು. ಪಾಕ ಬಂದನಂತರ ಇಳಿಸಿಕೊಂಡು ಶೋಧಿಸಿ ಸೀಸೆಯಲ್ಲಿಟ್ಟುಕೊಳ್ಳತಕ್ಕದ್ದು. ಈ ಶರಬತ್ತು ಒಣಗಿಕೊಂಡು ಹೋಗುತ್ತಿರುವ ಮಕ್ಕಳಿಗೆ ಕೆಲವು ದಿನಗಳ ವರೆಗೆ ಹಾಲಿನೊಡನೆ ಕೊಡುತ್ತಿದ್ದರೆ ಮಕ್ಕಳು ಬಹಳ ಪುಷ್ಟರಾಗುತ್ತಾರೆ, ಇತರ ಟಾಣಿಕ್ಕುಗಳಿಗೆ ಹಣವನ್ನು ಸುರಿಯುವುದಕ್ಕಿಂತಲೂ ಸುಲಭ ಸಾಧ್ಯವಾದ ಈ ಶರಬತ್ತನ್ನು ಮಾಡಿ ಮಕ್ಕಳಿಗೆ ಕೊಡುವುದರಿಂದ ವಿಶೇಷ ಲಾಭವುಂಟಾಗುತ್ತದೆ.

೨. ನಾಲ್ಕು ಖರ್ಜೂರಗಳನ್ನು (ಬೀಜಗಳನ್ನು ತೆಗೆದು) ಅರ್ಧ ಸೇರು ಹಾಲಿನಲ್ಲಿ ಹಾಕಿ ಕಾಯಿಸಿರಿ. ಕಾಯುವಾಗ ೧ ಗುರುಗಂಜಿ ತೂಕ ಕೇಸರಿಯನ್ನೂ ೪ ತೊಲ ಕಲ್ಲುಸಕ್ಕರೆಯನ್ನೂ ಹಾಕಿಬಿಡಿ. ಅರ್ಧಹಾಲು ಉಳಿದ ಮೇಲೆ ಇಳಿಸಿಕೊಂಡು ಖರ್ಜೂರವನ್ನು ತಿಂದು ಹಾಲನ್ನು ಕುಡಿದುಬಿಡಿ. ನಿಮ್ಮ ಶರೀರದಲ್ಲಿ ೪೮ ದಿನಗಳೊಳಗೆ ವಿಶೇಷ ಬಲವುಂಟಾಗುತ್ತದೆ. ಒಣಗಿಕೊಂಡೇ ಹೋಗುತ್ತಿರುವ ಮಕ್ಕಳಿಗೆ ಇದನ್ನು ಕೊಟ್ಟು ನೋಡಿ ಅವು ಕೆಲವು ದಿನಗಳೊಳಗೆ ಹುಷ್ಟ ಪುಷ್ಟಗಳಾಗಿಬಿಡುತ್ತವೆ. ಈ ಹಾಲು ದೊಡ್ಡವರಿಗೇ ಆಗಲಿ

ಮಕ್ಕಳಿಗೇ ಆಗಲಿ ಬೇಗನೆ ಜೀರ್ಣಿಸುವುದಿಲ್ಲವೆಂದು ಕಂಡುಬಂದರೆ ಇದರ ಸೇವನೆಯನ್ನು ಬಿಡಬೇಡಿ. ಆಗ ಒಣಗಿದ ಶುಂಠಿಯ ಚೂರ್ಣ ಮತ್ತು ಹಿಪ್ಪಲಿಯ ಚೂರ್ಣವನ್ನು ಸ್ವಲ್ಪ ಸ್ವಲ್ಪ ಸೇರಿಸಿ ಮತ್ತೆ ಆರಂಭಿಸಿರಿ. ಸಮರ್ಪಕವಾದ ಫಲವುಂಟಾಗುತ್ತದೆ.

೩. ಬೀಜವನ್ನು ತೆಗೆದ ಖರ್ಜೂರ, ಸಣ್ಣ ಹಿಪ್ಪಲಿ, ಬೀಜವನ್ನು ತೆಗೆದ ಒಣಗಿದ ದ್ರಾಕ್ಷೆ, ಕಲ್ಲುಸಕ್ಕರೆ, ಜತ್ತದ ಅರಳು ಅತಿಮಧುರ, ಇವುಗಳನ್ನು ಸಮಭಾಗವಾಗಿ ಕುಟ್ಟಿ ವಿಷಮಭಾಗದ ತುಪ್ಪ ಮತ್ತು ಜೇನುತುಪ್ಪದೊಡನೆ ಕಾಲು ಕಾಲು ತೊಲದಂತೆ ನಿತ್ಯದಲ್ಲಿ ಸೇವಿಸಿದರೆ ಅತ್ಯುಷ್ಣದಿಂದ ಬಂದಿರುವ ಕೆಮ್ಮಲು ಗುಣವಾಗುತ್ತದೆ.

೪. ಬೀಜವನ್ನುತೆಗೆದ ಖರ್ಜೂರ ಅರ್ಧ ತೊಲ, ಜಾಕಾಯಿ ಅರ್ಧ ತೊಲ, ಅಫೀಮು ಅರ್ಧ ತೊಲ, ಈ ಮೂರನ್ನೂ ಕಲ್ಪತ್ತಿಗೆ ಹಾಕಿ ವೀಳೆಯ ರಸದಲ್ಲಿ ೩ ಗಂಟೆಗಳ ಕಾಲ ಅರೆದು ನುಣ್ಣಗಾದ ನಂತರ ಹೆಸರುಕಾಳಿನಷ್ಟು ಮಾತ್ರೆಗಳನ್ನು ಮಾಡಿ ನೆರಳಿನಲ್ಲಿ ಒಣಗಿಸಿಟ್ಟುಕೊಳ್ಳಬೇಕು. ಒಂದು ದಿನದಲ್ಲಿ ೨ ಅಥವಾ ೩ ಮಾತ್ರೆಗಳನ್ನು ಮಜ್ಜಿಗೆಯೊಡನೆ ಸೇವಿಸಬೇಕು. ಇದರಿಂದ ಅತ್ಯಂತ ಅಸಾಧ್ಯವಾದ ಅತಿಸಾರವಾದರೂ ೭ ದಿನಗಳಲ್ಲಿ ಖಂಡಿತವಾಗಿ ನಿಂತು ಹೋಗುತ್ತದೆ. ಎಷ್ಟೋ ಸಲ ಪರೀಕ್ಷಿಸಲ್ಪಟ್ಟಿದೆ.

೫. ಪಿಂಡ ಖರ್ಜೂರ ೫, ಬೀಜದ ದ್ರಾಕ್ಷೆ (ಒಣಗಿದುದು) ೧ ತೊಲ, ಇವೆರಡನ್ನು ೧ ಪಾವು ಹಾಲು ಮತ್ತು ೧ ಪಾವು ನೀರಿನೊಡನೆ ಮಂದಾಗ್ನಿಯಿಂದ ಕುದಿಸಬೇಕು, ನೀರು ಇಂಗಿ ಹಾಲು ಮಾತ್ರ ಉಳಿದ ಮೇಲೆ ಇಳಿಸಿಕೊಂಡು ಕಿವಿಚಿ ಶೋಧಿಸಿ ಕುಡಿಯಬೇಕು. ಇದರಿಂದ ಭೇದಿಯು ತಡೆಯಿಲ್ಲದಂತೆ ಆಗಿ ಮೂಲವ್ಯಾಧಿಯು ಶಾಂತವಾಗುತ್ತದೆ. ಮಲಶುದ್ಧಿಯುಳ್ಳವರಿಗೆ ಪ್ರಾಯಃ ಮೂಲರೋಗವು ಬರುವುದಿಲ್ಲ. ಮಲಬದ್ಧತೆಯೇ ಮೂಲರೋಗದ ಮೂಲಕಾರಣ. ಈ ಪ್ರಯೋಗವನ್ನು ಕೆಲವು ದಿನಗಳ ವರೆಗೆ ಮಾಡಿ ನಿಲ್ಲಿಸಿ ಪುನಃ ಆರಂಭಿಸಬೇಕು.

೧ನೆಯ ವಾರದಲ್ಲಿ ಪ್ರತಿದಿನವೂ ಕುಡಿಯಬೇಕು.

೨ನೆಯ ವಾರದಲ್ಲಿ ದಿನಬಿಟ್ಟು ದಿನ ಕುಡಿಯಬೇಕು.
೩ನೆಯ ವಾರದಲ್ಲಿ ೪ ದಿನಗಳಿಗೊಮ್ಮೆ ಕುಡಿಯಬೇಕು.
೪ನೆಯ ವಾರದಲ್ಲಿ ೮ ದಿನಗಳಿಗೊಮ್ಮೆ ಕುಡಿಯಬೇಕು.

ಅನಂತರ ಕೆಲವು ದಿನಗಳ ವರೆಗೆ ಬಿಟ್ಟು ಅವಶ್ಯಕ ಬಿದ್ದಾಗ ಕುಡಿಯಬಹುದು. ಮಲಬದ್ಧತೆಯವರಿಗೆ ಭೇದಿಯ ಔಷಧಿಯನ್ನು ಸೇವಿಸುವ ಚಟವು ಬಿದ್ದಮೇಲೆ ಒಂದು ದಿನವೇನಾದರೂ ಔಷಧಿಯು ಇಲ್ಲವಾದರೆ ಅಂದು ಭೇದಿಯೇ ಆಗುವುದಿಲ್ಲ ಆದುದರಿಂದ ಮಧ್ಯದಲ್ಲಿ ಬಿಟ್ಟು ಬಿಟ್ಟು ಔಷಧಿಯನ್ನು ಸೇವಿಸುವುದುತ್ತಮ.

೬. ಖರ್ಜೂರದ ಬೀಜಗಳನ್ನು ಕುಟ್ಟಿ ಚೂರ್ಣಿಸಿ ಕೆಂಡದ ಮೇಲೆ ಹಾಕಿ ಆ ಹೊಗೆಯನ್ನು ಆಸನಕ್ಕೆ ಸೇರಿಸಿದರೆ ಮೂಲ ವ್ಯಾಧಿಯ ಮೊಳಕೆಗಳು ನಾಶವಾಗುತ್ತವೆ.

೭. ಖರ್ಜೂರದ ಎಲೆ ೨ ತೊಲವನ್ನು ೧॥ಪಾವು ನೀರಿನಲ್ಲಿ ಹಾಕಿ ಕಾಯಿಸಬೇಕು. ಅರ್ಧಪಾವು ಉಳಿದ ನಂತರ ಇಳಿಸಿ ಶೋಧಿಸಿ ಕೊಳ್ಳಬೇಕು. ಈ ಕಷಾಯವನ್ನು ಒಂದು ಗಾಜಿನ ಲೋಟದಲ್ಲಿ ಹಾಕಿ ೨೪ ಗಂಟೆಗಳ ಕಾಲ ಹಾಗೆಯೇ ಇಟ್ಟಿರಬೇಕು. ಮರುದಿನ ಆ ಕಷಾಯಕ್ಕೆ ॥ ತೊಲ ಜೇನು ತುಪ್ಪವನ್ನು ಕೂಡಿಸಿ ಕುಡಿಯಬೇಕು ಹೀಗೆ ೭ ದಿನಗಳ ವರೆಗೆ ಮಾಡಿಕೊಂಡು ಕುಡಿಯುವುದರಿಂದ ಹೊಟ್ಟೆ ಯಲ್ಲಿ ಎಂತಹ ಭಯಂಕರ ಕ್ರಿಮಿಗಳಿದ್ದರೂ ಸಾಯುತ್ತವೆ.

ಪರೀಕ್ಷಿಸಲ್ಪಟ್ಟಿದೆ.

೮. ಹಣ್ಣಾಗಿರುವ ೫ ತೊಲ ಪಿಂಡ ಖರ್ಜೂರವನ್ನು ತಿಂದು ಮೇಲೆ ಎರಡು ನಿಂಬೆಹಣ್ಣುಗಳ ರಸವನ್ನು ಹೀರುವುದರಿಂದ ಮಲ ದೊಳಗೆ ಸೇರಿಕೊಂಡಿರುವ ಕ್ರಿಮಿಗಳೆಲ್ಲವೂ ಸತ್ತು ಹೋಗುತ್ತವೆ.

೯. ಖರ್ಜೂರದ ಬೀಜಗಳನ್ನು ಕುಟ್ಟಿ ಶೋಧಿಸಿಕೊಳ್ಳಬೇಕು ಅನಂತರ ಆ ಚೂರ್ಣವನ್ನು ತುಪ್ಪದಲ್ಲಿ ಸುಪಕ್ವವಾಗಿ ಹುರಿಯಬೇಕು. ಆಮೇಲೆ ಗೋಪೀ ಚಂದನನ್ನು ಸಮಭಾಗವಾಗಿ ಅರೆದು ಕೂಡಿಸಿ ಸೀಸೆ ಯಲ್ಲಿಟ್ಟುಕೊಳ್ಳಬೇಕು. ಈ ಚೂರ್ಣವನ್ನು ನಿತ್ಯದಲ್ಲಿ ಅರ್ಧ ಅರ್ಧ

ತೊಲದಂತ್ತೆ ಅಕ್ಕಿಯನ್ನು ತೊಳೆದ ನೀರಿನೊಡನೆ ಸೇವಿಸುವುದರಿಂದ ಸಕಲವಿಧ ಪ್ರದರವೂ ಖಂಡಿತವಾಗಿ ಗುಣವಾಗುತ್ತದೆ.

ಪರೀಕ್ಷಿಸಲ್ಪಟ್ಟಿದೆ.

೧೦. ಖರ್ಜೂರದ ಬೀಜ ೫ ತೊಲ, ನೆಲ್ಲಿಯಚೆಟ್ಟು ೫ ತೊಲ ಕರ್ಪೂರ ||ತೊಲ, ಇವುಗಳನ್ನುಕುಟ್ಟಿ ಚೂರ್ಣ ಮಾಡಿಕೊಳ್ಳಬೇಕು. ಮೂಲವ್ಯಾಧಿಯ ಮೊಳಕೆಗಳಿಂದ ಪೀಡಿತರಾದವರು ಈ ಚೂರ್ಣ ವನ್ನು ಕೆಂಡದಮೇಲೆ ಹಾಕಿ ಹೊಗೆಯನ್ನು ಆಸನಕ್ಕೆ ಕೊಡುವು ದಾದರೆ ಕೆಲವು ದಿನಗಳೊಳಗೆ ಮೊಳೆಗಳು ನಾಶವಾಗುತ್ತವೆ. ಹೊಗೆಯು ಕೇವಲ ಆಸನಕ್ಕೇ ಸೇರುವಂತೆ ಅನುಕೂಲವಾದ ವ್ಯವಸ್ಥೆ ಯನ್ನು ಏರ್ಪಡಿಸಿಕೊಳ್ಳಬೇಕು. ಹೊಗೆಯು ಬರುತ್ತಿರುವಾಗ ರೋಗಿಯು ಮುಖವನ್ನು ಮಾತ್ರ ತೆರೆದುಕೊಂಡು ಉಳಿದ ಶರೀರವ ನ್ನೆಲ್ಲಾ ಹೊದಿಕೆಯಿಂದ ಮುಚ್ಚಿಕೊಂಡಿರುವುದುತ್ತಮ. ಈ ಪ್ರಯೋಗವನ್ನು ರಾತ್ರಿಯಲ್ಲಿ ಮಲಗುವಾಗ ಮಾಡಿಕೊಳ್ಳುವುದು ಅನುಕೂಲವಾಗಿರುತ್ತದೆ. ಅಥವಾ

೧೧. ಉತ್ತಮವಾದ ಹೊಗೆಯಸೊಪ್ಪು, ಉತ್ತಮವಾದ ಹೊಸಸುಣ್ಣ, ಒಳ್ಳೆಯ ಬೆಲ್ಲ, ಈ ಮೂರನ್ನೂ ಸಮವಾಗಿ ಕುಟ್ಟಿ ಇಟ್ಟುಕೊಳ್ಳಬೇಕು. ಇದನ್ನು ಸ್ವಲ್ಪ ಸ್ವಲ್ಪ ಕೆಂಡದ ಮೇಲೆ ಹಾಕಿ ಹೊಗೆಯನ್ನು ಮೊಳೆಗಳಿಗೆ ಕೊಡಬೇಕು. ಇದರಿಂದಲೂ ಮೂಲದ ಮೊಳಕೆಗಳು ನಾಶವಾಗುತ್ತವೆ. ಹೊಗೆಯು ಬರುತ್ತಿರುವಾಗ ಮೇಲಿನ ಪ್ರಯೋಗದಲ್ಲಿ ಬರೆದಿರುವಂತಹ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು.

೧೨. ಬೀಜಗಳನ್ನು ತೆಗೆದ ಖರ್ಜೂರ ೧೫, ಕೊತ್ತುಂಬರಿ ಸೊಪ್ಪಿನ ಬೇರು ೧|| ತೊಲ, ಇವೆರಡನ್ನೂ ಜಜ್ಜಿ ೧|| ಪಾವು ಹಾಲಿನಲ್ಲಿ ಹಾಕಿ ಚೆನ್ನಾಗಿ ಕಾಯಿಸಬೇಕು, ಇದನ್ನು ಗರ್ಭವೇ ನಿಲ್ಲದಿರುವ ಸ್ತ್ರೀಯರು ಋತು ಸ್ನಾನವಾದಂದಿನಿಂದ ೭ ದಿನಗಳ ವರೆಗೆ ಕುಡಿದರೆ ಗರ್ಭವು ನಿಲ್ಲುತ್ತದೆ.

---

**ಬೇಲದ ಹಣ್ಣು**—ಒಗರು,ಹುಳಿ, ಸಿಹಿ,ರಸಗಳಿಂದ ಕೂಡಿರು ವುದು, ತ್ರಿದೋಷನಾಶಕ ಮತ್ತು ಕಫ ಸಂಬಂಧವಾದ, ಪಿತ್ತಸಂಬಂಧ

ವಾದ ರೋಗವನ್ನು ನಿವಾರಿಸುವುದು. ದಮ್ಮು-ಕೆಮ್ಮು-ಗ್ರಹಣಿ-ತೂಲ ಬಿಕ್ಕಳಿಕೆ-ವಾಂತಿ-ಅಗ್ನಿಮಾಂದ್ಯ- ಮೂಲವ್ಯಾಧಿ-ಅರೋಚಕ-ಆಯಾಸ ವಿಷ-ದಾಹ - ಇವುಗಳನ್ನು ಶಾಂತಗೊಳಿಸುವುದು, ಮೇಹನಿವಾರಣೆ ಯಲ್ಲಿ ಇದು ಹೆಸರುಗೊಂಡಿದೆ. ಅತ್ಯಂತ ಪಥ್ಯವಾಗಿರುವುದರಿಂದಲೇ "ಕಪಿತ್ಥಂ ಸರ್ವದಾ ಪಥ್ಯಂ" ಎಂಬ ಪ್ರಾಶಸ್ತ್ಯವು ಬೇಲದ ಹಣ್ಣಿಗೆ ಬಂದಿರುತ್ತದೆ.

೧. ಬೇಲದ ಹಣ್ಣಿನ ತಿರುಳನ್ನು ತೆಗೆದುಕೊಂಡು ಸಮವಾಗಿ ಸಕ್ಕರೆಯನ್ನು ಕೂಡಿಸಿ ತಿನ್ನುವುದರಿಂದ ಅಥವಾ ಬೇಲದ ಎಲೆಗಳನ್ನು ಕಲ್ಲಿನ ಮೇಲೆ ಅರೆದು ರಸವನ್ನು ಹಿಂಡಿಕೊಂಡು ಪಸುವಿನ ಹಾಲಿನಲ್ಲಿ ಕೂಡಿಸಿ ಕುಡಿಯುವುದರಿಂದ ಅತಿ ಪ್ರಬಲವಾದ ಪಿತ್ತವು ಶಾಂತ ವಾಗುವುದು.

೨. ಬೇಲದ ಹಣ್ಣಿನ ಬೀಜ ಕಾಲು ತೊಲವನ್ನು ಸ್ವಲ್ಪ ಹುರಿದು ತಿನ್ನುವುದರಿಂದ ಅತಿಸಾರವು ನಿಲ್ಲುತ್ತದೆ.

೩. ಬೇಲದ ಎಲೆಗಳನ್ನು ತಂದು ಒಣಗಿಸಿ ಕುಟ್ಟಿ ಶೋಧಿಸಿ ಕೊಳ್ಳಿ. ಇದರಲ್ಲಿನ ಅರ್ಧ ತೊಲ ಚೂರ್ಣವನ್ನು ಸೇವಿಸಿ ಮೇಲೆ ಸಕ್ಕರೆಯನ್ನು ಕೂಡಿಸಿದ ಹಾಲನ್ನು ಕುಡಿಯಿರಿ. ಈ ಚೂರ್ಣದಿಂದ ಶರೀರದೊಳಗಿನ ಹೆಚ್ಚಿನ ಉಷ್ಣತೆಯು ಕಡಿಮೆಯಾಗುತ್ತದೆ ಮತ್ತು ವೀರ್ಯವು ಪುಷ್ಟವಾಗುತ್ತದೆ. ಎಷ್ಟೋಸಲ ಪರೀಕ್ಷಿಸಿರುವುದಾಗಿದೆ.

೪. ಬೇಲದ ಚಕ್ಕೆ, ಇಪ್ಪೆಯ ಮರದಚಕ್ಕೆ, ಇವೆರಡು ಚಕ್ಕೆ ಗಳನ್ನುಕುಟ್ಟಿ ೨ ತೊಲ ರಸವನ್ನು ತೆಗೆದು ಅದರಲ್ಲಿ ನಾಲ್ಕು ಮೆಣಸಿನ ಕಾಳುಗಳ ಚೂರ್ಣವನ್ನುಸೇರಿಸಿ ನಿತ್ಯದಲ್ಲಿ ಕುಡಿಯುವುದರಿಂದ ಎಂತಹ ಅಸಾಧ್ಯ ಪ್ರಮೇಹವಾದರೂ ನಾಶವಾಗುತ್ತದೆ. ಇದನ್ನು ಹಳ್ಳಿಯ ಬಡ ಬಂಧುಗಳು ಅವಶ್ಯವಾಗಿ ಮಾಡಿಕೊಂಡು ಸುಖಿಗಳಾಗಬಹುದು. ಹಳ್ಳಿಯ ಬಡವರಿಗೆ ಇಂತಹ ಮನೆಯ ಮುಂದಿರುವ ವೃಕ್ಷಗಳೇ ಕಲ್ಪ ವೃಕ್ಷಗಳಾಗಿವೆ. ಬೇಲದ ಚಕ್ಕೆಯ ರಸದಲ್ಲಿ ನೆಲ್ಲಿಯ ರಸ ಅಥವಾ ನೆಲ್ಲಿಯಚೆಟ್ಟನ್ನು ಮತ್ತು ಹಿಪ್ಪಲಿ, ಸೈಂಧವ ಲವಣಗಳನ್ನು ಕೂಡಿಸಿ ಕುಡಿಯುವುದರಿಂದ ಉಬ್ಬಸವು ಶಾಂತವಾಗುತ್ತದೆ.

೫. ಬೇಲದ ಚಕ್ಕೆಯ ರಸಕ್ಕೆ ಜೇನುತುಪ್ಪವನ್ನು ಮತ್ತು ಹಿಪ್ಪಲಿಯ ಪುಡಿಯನ್ನು ಕೂಡಿಸಿ ಕುಡಿಯುವುದರಿಂದ ಉಬ್ಬಸದ ವೇಗವು ತಗ್ಗುತ್ತದೆ.

---

**ನೇರಳೆಹಣ್ಣು**—ಒಗರು, ಸಿಹಿ ಮತ್ತು ಹುಳಿರಸದಿಂದ ಕೂಡಿರುವುದು, ಹಸಿವನ್ನು ಹೆಚ್ಚಿಸುವುದು, ಮೇಹ ಮತ್ತು ಪಿತ್ತವನ್ನು ಕಡಿಮೆ ಮಾಡುವುದು, ಪಿತ್ತಾಧಿಕ್ಯದಿಂದುಂಟಾಗಿರುವ ಭೇದಿಯನ್ನು ಅಡಗಿಸುವುದು,ಉಷ್ಣಪ್ರಕೃತಿಯವರಿಗೆ ಹಿತಕರವಾಗಿರುವುದು,ಹೃದಯ (Heart) ಮತ್ತು ರಕ್ತದಲ್ಲಿ ಸೇರಿರುವ ಉಷ್ಣತೆಯನ್ನು ತಗ್ಗಿಸುವುದು, ಹೊಟ್ಟೆಯಲ್ಲಿ ವಾಯುವನ್ನು ತಡೆಯುವುದು, ಗರ್ಭಿಣಿಯರಿಗೆ ಮತ್ತು ಗಂಟಲಿನ ರೋಗವುಳ್ಳವರಿಗೆ ಹಿತಕರವಲ್ಲ. ಇದರ ಚಕ್ಕೆಯ ರಸ ಅಥವಾ ಕಷಾಯದಿಂದ ಗ್ರಹಣಿ-ಸಂಗ್ರಹಣಿ-ಅತಿಸಾರ—ನೀರಿನಂತಹ ಭೇದಿ - ಇವುಗಳು ಶಾಂತವಾಗುವುವು. ಚಕ್ಕೆಯ ಕಷಾಯವನ್ನು ಬಾಯಿಯಲ್ಲಿ ಹಾಕಿಕೊಂಡು ಮುಕ್ಕಳಿಸುವುದರಿಂದ ಗಂಟಲಿನ ಹುಣ್ಣು (Sore Throat) ಆರುವುದು ಮತ್ತು ಚಕ್ಕೆಯ ಗಟ್ಟಿಕಷಾಯದಿಂದ ಹುಣ್ಣು ಮಾಯುವುದು. ಇದರ ಎಳೆಯ ಎಲೆಗಳನ್ನು ಕುಟ್ಟಿ ರಸವನ್ನು ತೆಗೆದು ಆಡಿನ ಹಾಲಿನೊಡನೆ ಕುಡಿಸುವುದರಿಂದ ರಕ್ತಭೇದಿಯು ನಿಲ್ಲುವುದು. ಎಲೆಗಳನ್ನು ಅರೆದು ಚೇಳು ಕಚ್ಚಿರುವ ಸ್ಥಳಕ್ಕೆ ಲೇಪಿಸುವುದರಿಂದ ವಿಷವು ಇಳಿಯುವುದು, ನೇರಳೆಹಣ್ಣಿನ ರಸದಿಂದ ಮಾಡಿದ (Syrup) ತರಬತ್ತು ನೀರಿನಂತಹ ಭೇದಿಯನ್ನು ಕಟ್ಟುತ್ತದೆ.

೧. ನೇರಳೆಹಣ್ಣಿನ ರಸದಲ್ಲಿ ಅತಿಮಧುರದ ಚೂರ್ಣವನ್ನು ಹಾಕಿ ಕುಡಿಯುವುದರಿಂದ ವಾಂತಿಯು ನಿಲ್ಲುತ್ತದೆ.

೨. ನೇರಳೆಯಎಲೆ, ಮಾವಿನಎಲೆ, ೨ ತೊಲಗಳಷ್ಟನ್ನುತಂದು ಕಷಾಯವನ್ನು ಮಾಡಿ ತಣ್ಣಗಾದ ನಂತರ ಅದರಲ್ಲಿ ಬತ್ತದ ಅರಳಿನ ಚೂರ್ಣ ಮತ್ತು ಜೇನುತುಪ್ಪವನ್ನು ಸೇರಿಸಿ ಕುಡಿಯುವುದರಿಂದ ವಾಂತಿ, ಅತಿಸಾರ, ಮಿತಿಮೀರಿದ ಬಾಯಾರಿಕೆ, ಇವೆಲ್ಲವೂ ಶಾಂತವಾಗುತ್ತವೆ. ಈ ಕಷಾಯವು ಬಹು ಪ್ರಯೋಜನಕಾರಿಯಾಗಿದೆ.

೩. ನೇರಳೆಯ ಎಲೆ ಮತ್ತು ಚಕ್ಕೆ, ಮಾವಿನ ಎಲೆ, ಬೂರಗದ ಎಲೆ, ಇವುಗಳನ್ನು ಕುಟ್ಟಿ ಕಷಾಯವನ್ನು ಮಾಡಿ ಆ ನೀರಿನಿಂದ ಆಸನವನ್ನು ತೊಳೆದರೆ ಬಹಳ ಭೇದಿಯಾಗುವುದರಿಂದ ಆಸನದ ಒಳ ಭಾಗವು (ಗೂದೆ) ಹೊರಗೆ ಬಂದಿದ್ದರೆ ಒಳಕ್ಕೆ ಹೋಗುತ್ತದೆ.

೪. ನೇರಳೆಯ ಎಲೆ, ದಾಳಿಂಬೆಯ ಎಲೆ, ಮುಡಿವಾಳ' ತುಂಗೆಗಡ್ಡೆ, ಬಿಲ್ವದ ತಿರುಳು, ಪ್ರತಿಯೊಂದು ಒಂದೊಂದು ತೊಲ ತಂದು ಕಷಾಯವನ್ನು ಮಾಡಿ ಕುಡಿಯುವುದರಿಂದ ನದಿಯಂತೆ ಹರಿಯುತ್ತಿರುವ ಭೇದಿಯೂ ನಿಂತುಹೋಗುತ್ತದೆ.

೫. ನೇರಳೆಯ ಎಲೆಗಳನ್ನು ನೀರಿನೊಡನೆ ಅರೆದು ಹಚ್ಚಿ ಕೊಳ್ಳುವುದರಿಂದ ಶರೀರದ ದುರ್ವಾಸನೆಯು ದೂರವಾಗುತ್ತದೆ.

೬. ನೇರಳೆಯ ಎಲೆ ಅಥವಾ ಚಕ್ಕೆಯನ್ನು ನೀರಿನೊಡನೆ ಅರೆದು ಕುದಿಸಿ ಆ ನೀರಿನಿಂದ ಕಂಕುಳನ್ನು ತೊಳೆದರೆ ಕಂಕುಳಗಳ ದುರ್ವಾಸನೆಯು ಹೋಗುತ್ತದೆ.

೭. ನೇರಳೆಯಚಕ್ಕೆ, ಕಂಚುವಾಳದ ಚಕ್ಕೆ, ಬಕುಳದ ಚಕ್ಕೆ, ಬೂರಗದ ಚಕ್ಕೆ, ಈನಾಲ್ಕುಚಕ್ಕೆಗಳನ್ನು ಎರಡೆರಡು ತೊಲದಂತೆ ತಂದು ಜಜ್ಜಿ ಒಂದು ಸೇರು ನೀರಿನಲ್ಲಿಹಾಕಿ ಕುದಿಸಿರಿ, ಅರ್ಧ ಸೇರು ನೀರು ಉಳಿದ ನಂತರ ಆ ನೀರನ್ನುತೆಗೆದುಕೊಂಡು ಆಸನವನ್ನುತೊಳೆಯಿರಿ, ಮೂಲ ವ್ಯಾಧಿಯು ನಾಶವಾಗುತ್ತದೆ. ಇದನ್ನೇ ಎರಡು ವಾರಗಳ ವರೆಗೂ ಸಾಧಿಸಿ ನೋಡಿ ತೊಂದರೆಯೇನೂ ಇಲ್ಲ. ಇದು ಅತಿಸುಲಭವೂ ಗುಣಕಾರಿಯೂ ಆಗಿದೆ ಪಟ್ಟಣಿಗರು ಮಾಡದಿದ್ದರೂ ನಮ್ಮ ಹಳ್ಳಿಯ ಬಡ ಬಂಧುಗಳಾದರೂ ಇಂತಹ ಸುಲಭ ಚಿಕಿತ್ಸೆಗಳನ್ನು ಅವಶ್ಯವಾಗಿ ಮಾಡಿಕೊಳ್ಳುವರೆಂಬ ನಂಬಿಕೆಯು ಇರುತ್ತದೆ.

೮. ನೇರಳೆಯ ಗಿಡದ ಎರಡೂವರೆ ಎಲೆಗಳನ್ನು ನೀರಿನೊಡನೆ ಅರೆದು ಕುಡಿಸಿದರೆ ಹಾವಿನ ವಿಷವು ಇಳಿಯುತ್ತದೆ. ಕೂಡಲೇ ಏನು ಮಾಡುವುದಾಗದಿದ್ದರೂ ಹಾವು ಕಡಿದ ಕೂಡಲೇ ಅಸಹ್ಯಪಟ್ಟು ಕೊಳ್ಳದೆ ಆ ಸ್ಥಾನದ ಮೇಲೆ ಮೂತ್ರವಿಸರ್ಜನೆ ಮಾಡುವುದು ಅತ್ಯುತ್ತಮವೆಂದು ಅನೇಕ ವೈದ್ಯರು ಮತ್ತು ಹಕೀಮರು ಹೇಳಿರು

ತ್ತಾರೆ ಮತ್ತು ಈ ಮಾತನ್ನು ಅನೇಕ ಗ್ರಂಥಕರ್ತರೂ ಬರೆದಿರುತ್ತಾರೆ. ಈ ಅನುಭವದ ಮಾತನ್ನು ಎಲ್ಲರೂ ನೆನಪಿನಲ್ಲಿಟ್ಟುಕೊಂಡಿರುವುದುತ್ತಮ ಸರ್ಪ, ಹುಚ್ಚುನಾಯಿ ಮುಂತಾದ ವಿಷಯುಕ್ತ ಪ್ರಾಣಿಗಳು ಕಡಿದಾಗ ಈ ಮಾತನ್ನು ಮರೆಯಬಾರದು.

೯. ಸುಟ್ಟಗಾಯವು ಗುಣವಾದನಂತರ ಆ ಸ್ಥಳದಲ್ಲಿ ಕಲೆಯು ಹೋಗದಿದ್ದರೆ ನೇರಳೆಯ ಎಲೆಗಳನ್ನು ಅರೆದು ಹಚ್ಚುತ್ತಿದ್ದರೆ ಕಲೆಯು ಹೊರಟು ಹೋಗುತ್ತದೆ.

---

**ಅತ್ತಿಯ ಹಣ್ಣು**—ಸಿಹಿ, ತಂಪು, ರಕ್ತವೃದ್ಧಿಕರ, ವೀರ್ಯವನ್ನು ವೃದ್ಧಿಗೊಳಿಸಿ ಸ್ತಂಭನಮಾಡುವುದು ಮತ್ತು ಮೇಹರೋಗ-ಕ್ಷಯ-ರಕ್ತಪಿತ್ತ-ಅತಿಸಾರ ಇವುಗಳನ್ನು ಶಮನಗೊಳಿಸಿ ಕಣ್ಣುಗಳಿಗೆ ತಂಪನ್ನೀಯುವುದು, ಪಿತ್ತ ಶ್ಲೇಷ್ಮಗಳನ್ನು ಅಡಗಿಸುವುದು, ಆಲಸ್ಯದಿಂದ ಜೀರ್ಣವಾಗುತ್ತದೆ.

೧. ಅತ್ತಿಯ ಹಣ್ಣನ್ನು ಜೇನುತುಪ್ಪದೊಡನೆ ತಿನ್ನುವುದರಿಂದ ಮೂಗು, ಬಾಯಿ, ಮೂತ್ರದ್ವಾರ ಮಲದ್ವಾರಗಳಿಂದ ಬೀಳುವ ರಕ್ತ (ರಕ್ತಪಿತ್ತರೋಗ) ವು ನಿಂತು ಹೋಗುತ್ತದೆ.

೨. ಪಕ್ವವಾಗಿರುವ ಅತ್ತಿಯ ಹಣ್ಣು ೫ ಸೇರು, ಅತ್ತಿಯ ಚಕ್ಕೆ ೫ ಸೇರು, ಇವೆರಡನ್ನೂ ಸ್ವಲ್ಪ ಕುಟ್ಟಬೇಕು, ಅನಂತರ ೨೦ ಸೇರು ನೀರಿನಲ್ಲಿ ೪೮ ಗಂಟೆಗಳ ವರೆಗೆ ನೆನೆಹಾಕಿದ್ದು, ಅದನ್ನು ಒಲೆಯ ಮೇಲಿಟ್ಟು ಕುದಿಸಬೇಕು, ಮೂರು ಸೇರು ನೀರು ಉಳಿದನಂತರ ಕಿವಿಚಿ ಶೋಧಿಸಿಕೊಳ್ಳಬೇಕು; ಇದನ್ನು ಒಂದು ಕಲಾಯಿಯ ಪಾತ್ರೆಗೆ ಹಾಕಿ ೫ ಸೇರು ಸಕ್ಕರೆಯನ್ನೂ ಹಾಕಿ ಕಾಯಿಸಿ ಶರಬತ್ತಿನ ಪಾಕವನ್ನು ಮಾಡಿಕೊಳ್ಳಬೇಕು. ದಿನಕ್ಕೆ ಮೂರುಸಲ ಎರಡೆರಡು ತೊಲ ಷರಬತ್ತನ್ನು ಸೇವಿಸಿದರೆ ಶ್ವಾಸರೋಗವು ಅಡಗುತ್ತದೆ.

೩. ಅತ್ತಿಯ ಹಣ್ಣುಗಳನ್ನು ಒಣಗಿಸಿ ಕುಟ್ಟಿ, ಚೂರ್ಣಿಸಿ, ಈ ಚೂರ್ಣವನ್ನು ಮತ್ತು ಕಲ್ಲುಸಕ್ಕರೆಯನ್ನೂ ನೊರೆಹಾಲಿನಲ್ಲಿ ಸಮವಾಗಿ ಹಾಕಿ ಕುಡಿದರೆ ೧೫ ದಿನಗಳೊಳಗೆ ವೀರ್ಯ ಸಂಬಂಧವಾದ ರೋಗವು ಖಂಡಿತವಾಗಿ ಶಾಂತವಾಗುವುದು.

೪. ಅತ್ತಿಯ ಹಣ್ಣುಗಳನ್ನು ಒಣಗಿಸಿ ನುಣ್ಣಗೆ ಚೂರ್ಣಿಸಿ ಬಟ್ಟೆಯಿಂದ ಶೋಧಿಸಬೇಕು. ಇದಕ್ಕೆ ತಕ್ಕಷ್ಟು ಜೇನುತುಪ್ಪ ಮತ್ತು ಕಲ್ಲುಸಕ್ಕರೆಯ ಪುಡಿಯನ್ನು ಸೇರಿಸಿ ಮೂರು ಮೂರು ತೊಲದ ಗುಳಿಗೆಗಳನ್ನು ಮಾಡಿಟ್ಟುಕೊಂಡು ೭ ದಿನಗಳ ವರೆಗೆ ಪ್ರಾತಃಕಾಲ ಸಾಯಂಕಾಲಗಳಲ್ಲಿ ಒಂದೊಂದು ಗುಳಿಗೆಯನ್ನು ಸೇವಿಸಿದರೆ ಅಸಾಧ್ಯವಾದ ಪ್ರದರರೋಗವೂ ನಿಶ್ಚಯವಾಗಿ ಗುಣವಾಗುತ್ತದೆ. ರೋಗವು ಬಹಳ ಹಳೆಯದಾಗಿದ್ದರೆ ಮಾತ್ರ ಒಂದು ಮಂಡಲದ ವರೆಗಾದರೂ ಸೇವಿಸಬೇಕು.

೫. ಅತ್ತಿಯ ಹಣ್ಣು ಅಥವಾ ಅತ್ತಿಯ ಒಳಚಕ್ಕೆಯ ರಸದಲ್ಲಿ ದರ್ಭೆಹುಲ್ಲಿನ ಬೇರನ್ನು ಅರೆದು ಸೇವಿಸಿ, ಮೇಲೆ ಅಕ್ಕಿತೊಳೆದ ನೀರನ್ನು ಕುಡಿಯುವುದರಿಂದ ಪ್ರದರರೋಗವು ೭ ದಿನಗಳೊಳಗೆ ಶಾಂತವಾಗುತ್ತದೆ. ಪರೀಕ್ಷಿಸಲ್ಪಟ್ಟಿದೆ.

೬. ಅತ್ತಿಯ ಬೇರಿನ ಮೇಲಿರುವ ತೊಗಟೆಯ ಕಷಾಯವನ್ನು ಮಾಡಿ ಕುಡಿಸಿದರೆ ಗರ್ಭಿಣಿಯ ಗರ್ಭಸ್ರಾವ ಅಥವಾ ಗರ್ಭಪಾತ (೪ ತಿಂಗಳುಗಳ ವರೆಗೆ ರಕ್ತರೂಪವಾಗಿ ಕಳೆಯುವುದು ಗರ್ಭಸ್ರಾವ ೫ನೆಯ ೬ನೆಯ ತಿಂಗಳಲ್ಲಿ ಕಳೆಯುವುದು ಗರ್ಭಪಾತ) ಇವೆರಡೂ ನಿಲ್ಲುತ್ತವೆ.

೭. ಅತ್ತಿಯ ಎಲೆಯ ರಸದಲ್ಲಿ ಜವೆಗೋಧಿಯ ಹಿಟ್ಟನ್ನು ಕಲಿಸಿ ಕಟ್ಟುವುದರಿಂದ ಬಹಳ ಗಟ್ಟಿಯಾಗಿ ಕಲ್ಲಿನಂತಿರುವ ಬಾವು ಕರಗಿ ಹೋಗುತ್ತದೆ.

೮. ಅತ್ತಿಯ ಹಾಲಿನಲ್ಲಿ ಅರಳೆಯನ್ನು ಎದ್ದಿ ಭಗಂದರದ ಹುಣ್ಣಿನೊಳಗೆ ಕೆಲವು ದಿನಗಳ ವರೆಗೆ ಇಡುತ್ತಿದ್ದರೆ ವಿಶೇಷ ಲಾಭ ವುಂಟಾಗುತ್ತದೆ. ಕೆಲವು ಹುಣ್ಣುಗಳಿಂದ ಯಾವಾಗಲೂ ಕೀವು ಸೋರುತ್ತಲೇ ಇರುತ್ತದೆ, ಅಂತಹ ಹುಣ್ಣುಗಳಿಗೆ ಅತ್ತಿಯ ಹಾಲು ಬಹಳ ಗುಣಕಾರಿಯಾಗಿದೆ.

೯. ಅತ್ತಿಯ ಹಾಲು ಅರ್ಧ ತೊಲ, ಆಲದ ಹಾಲು ಅರ್ಧ ತೊಲ ಶುದ್ಧವಾದ ಅಮೃತಬಳ್ಳಿ ಸಕ್ಕರೆ (ತಿಪ್ಪಸತ್ತು) ಅರ್ಧ ತೊಲ

ಕಲ್ಲುಸಕ್ಕರೆ ಒಂದು ತೊಲ. ಈ ನಾಲ್ಕನ್ನು ಸೇರಿಸಿ ಎರಡು ಹೊತ್ತೂ ಸೇವಿಸಿರಿ. ನಿಮ್ಮ ವೀರ್ಯವು ಶುದ್ಧವಾಗುವುದಲ್ಲದೆ ವೀರ್ಯದ ವಿಕಾರವೆಷ್ಟಿದ್ದರೂ ನಾಶವಾಗುತ್ತದೆ ಮತ್ತು ಬಹಳ ಪುಷ್ಟವಾಗುತ್ತದೆ. ಇದು ಗೃಹಸ್ಥರಿಗೆ ಅತ್ಯಂತಾನಂದವನ್ನುಂಟುಮಾಡುತ್ತದೆ.

೧೦. ಅತ್ತಿಯ ಹಾಲು = ತೂಕವನ್ನು ಬತ್ತಾಸಿನಲ್ಲಿ ಅಥವಾ ಸಕ್ಕರೆಯಲ್ಲಿ ಹಾಕಿಕೊಂಡು ಸೇವಿಸುವುದರಿಂದ ಭೇದಿಯು ನಿಲ್ಲುತ್ತದೆ.

೧೧. ಅತ್ತಿಯ ಕಾಯಿಗಳನ್ನು ತಿಂದು ಮೇಲೆ ಸಕ್ಕರೆಯನ್ನು ಕೂಡಿಸಿದ ನೊರೆಹಾಲನ್ನು ಕುಡಿಯುವುದರಿಂದ ಎದೆಯ ಉರಿ, ಮೂತ್ರದ ಉರಿ, ಪ್ರಮೇಹ, ಇವುಗಳು ನಾಶವಾಗುತ್ತವೆ. ಮೂತ್ರದ ರೋಗಿಗಳಿಗೆ ಇದು ಬಹಳ ಲಾಭಕರವಾಗಿದೆ.

೧೨. ಅತ್ತಿಯ ಮರದ ಚಕ್ಕೆ ಅರ್ಧ ತೊಲ, ಆಲದ ಮರದ ಎಳೆಕುಡಿ ಅರ್ಧತೊಲ, ಕಲ್ಲುಸಕ್ಕರೆ ಅರ್ಧ ತೊಲ, ಈ ಮೂರನ್ನೂ ಕಲ್ಲಿನ ಮೇಲೆ ಅರೆದು ೩ ತೊಲ ಹಾಲಿನಲ್ಲಿ ಕಲಿಸಿ ಸೇವಿಸಬೇಕು. ೪೦ ದಿನಗಳಲ್ಲಿ ಅದ್ಭುತವಾದ ಕಾರ್ಯವನ್ನು ಮಾಡಿ ತೋರಿಸುತ್ತದೆ. ಇದರಿಂದ ನೀರಿನಂತಹ ವೀರ್ಯವು ಗಟ್ಟಿಯಾಗುತ್ತದೆ.

---

**ನಿಂಬೆಹಣ್ಣು**—ಹುಳಿ, ಜೀರ್ಣಶಕ್ತಿವರ್ಧಕ. ತ್ರಿದೋಷ ನಾಶಕ, ಬುದ್ಧಿಭ್ರಮೆ, ಕಣ್ಣಿನರೋಗ, ಆಯಾಸ, ಸಕಲವಿಧ ವಿಷ, ಅರೋಚಕ, ದಾಹ, ಶೂಲ, ಬಿಕ್ಕಳಿಕೆ, ವಾಂತಿ, ದಮ್ಮು, ಗುಲ್ಮ, ಕಾಮಾಲೆ, ಮಲಬಂಧ, ಮಿತಿಮೀರಿದ ಪಿತ್ತ, ಇವುಗಳನ್ನು ನಾಶಗೊಳಿಸುವುದಲ್ಲದೆ; ಮೂಗು - ಬಾಯಿ-ಗಂಟಲು-ಇವುಗಳಲ್ಲುಂಟಾಗುವ ವಿಕಾರಗಳನ್ನು ಶಾಂತಗೊಳಿಸುವುದು ಮತ್ತು ಶರೀರದೊಳಗಿನ ಕೆಟ್ಟ ಪದಾರ್ಥಗಳನ್ನು ಹೊರಗೆ ಹಾಕುವುದು, ಸಕಲವಿಷ ಮಾದಕವಸ್ತುಗಳಿಂದುಂಟಾಗುವ ಉಪದ್ರವಗಳನ್ನು ನಿರ್ಮೂಲಗೊಳಿಸುವುದು. ನಿಂಬೆಹಣ್ಣಿನಿಂದ ಮಲೇರಿಯಾ ಜ್ವರದವರಿಗೆ ಬಹಳ ಉಪಕಾರವಾಗುತ್ತದೆ. ಯಕೃತ್ತಿನ (ಲೀವರ್) ವಿಕಾರ ಮತ್ತು ಈ ವಿಕಾರದಿಂದುಂಟಾಗುವ ಜ್ವರ, ಸಂಧಿ ವಾತ, ಕೀಲುಗಳ ಬಾವು, ಕೀಲುಗಳ ಗಂಟು, ಇವುಗಳಿಗೆ

ಅತ್ಯಂತ ಲಾಭದಾಯವಾಗಿದೆ. ಪಿತ್ತಕೋಶದಲ್ಲಿ ವಿಕಾರವುಂಟಾದಾಗ. ತಲೆ ತಿರುಗುವುದು, ಕಣ್ಣುಗಳಿಗೆ ಮಂಜು ಕವಿದಂತಾಗುವುದು, ಮುಂತಾದ ತೊಂದರೆಗಳುಂಟಾಗುತ್ತವೆ. ಇಂತಹ ಸಂದರ್ಭದಲ್ಲಿ ಸ್ವಲ್ಪ ಬಿಸಿನೀರಿಗೆ ಒಂದು ನಿಂಬೆಹಣ್ಣನ್ನುಹಿಂಡಿ ಕುಡಿದರೆ ಕೂಡಲೇ ಗುಣವು ತೋರುವುದು. ಕೀಲುಗಳಲ್ಲಿ ವೇದನೆಯುಂಟಾದಾಗ ಪ್ರಾತಃಕಾಲ ಮತ್ತು ಸಾಯುಂಕಾಲದಲ್ಲಿ ಒಂದೊಂದು ನಿಂಬೆ ಹಣ್ಣನ್ನು ತಿನ್ನಬೇಕು. ಮಲೇರಿಯಾ ಜ್ವರ ಬಂದಾಗ ಒಂದು ನಿಂಬೆ ಹಣ್ಣನ್ನು ಒಂದೂಕಾಲು ಸೇರು ನೀರಿನಲ್ಲಿ ಹಿಂಡಿ ಕುದಿಸಬೇಕು. ಅರ್ಧಸೇರು ನೀರು ಉಳಿದನಂತರ ಪ್ರಾತಃಕಾಲದಲ್ಲಿ ಕುಡಿಯಬೇಕು. ನಾಲಗೆಯಲ್ಲಿ ಗಾಯಗಳಾಗಿದ್ದರೆ, ಗಂಟಲಿನೊಳಗೆಗಂಟುಗಳಾಗಿದ್ದರೆ, ನಿಂಬೆ ಹಣ್ಣಿನ ರಸವನ್ನು ಮೆಲ್ಲಗೆ ಹೀರುತ್ತಿರಬೇಕು. ಈ ರಸದಿಂದ ಗಂಟಲಿನ ಉರಿಯೂ ಕಮ್ಮಿಯಾಗುತ್ತದೆ.

ಯಾವ ಸ್ತ್ರೀಯರಿಗೆ ಪ್ರಸವಸಮಯಗಳಲ್ಲಿ ಯಾವಾಗಲೂ ವೇದನೆಯುಂಟಾಗುವುದು ಪದ್ಧತಿಯಾಗಿಬಿಟ್ಟಿದೆಯೋ ಅಂತಹ ಸ್ತ್ರೀಯರು ಪ್ರತಿಯೊಂದು ಗರ್ಭದ ಸಮಯದಲ್ಲಿ ನಾಲ್ಕನೆಯ ತಿಂಗಳಿನಿಂದ ಆರಂಭಿಸಿ ಪ್ರಸವ ಕಾಲದ ವರೆಗೂ ನಿಂಬೆಹಣ್ಣಿನ ಪಾನಕವನ್ನು ಮಾಡಿಕೊಂಡು ನಿತ್ಯದಲ್ಲಿ ಕುಡಿಯುತ್ತಿದ್ದರೆ ಹೆರಿಗೆಯು ಸ್ವಲ್ಪವೂ ಆಯಾಸವಿಲ್ಲದೆ ಅತ್ಯಂತ ಸುಖಕರವಾಗಿ ಜರುಗುತ್ತದೆ. ಪ್ರತಿದಿನದ ಊಟಕ್ಕೆ ನಿಂಬೆಹಣ್ಣನ್ನು ಉಪಯೋಗಿಸುವುದು ಸರ್ವೋತ್ತಮವಾಗಿರುತ್ತದೆ. ನಿಂಬೆಹಣ್ಣನ್ನು ಎರಡು ಭಾಗಮಾಡಿ ಒಂದರಮೇಲೆ ಉಪ್ಪಿನ ಪುಡಿಯನ್ನು ಹಾಕಿ ನಾಲಗೆಗೆ ತಿಕ್ಕುವುದರಿಂದ ನಾಲಗೆಯ ಅರುಚಿ ಮತ್ತು ಬಾಯಿಯ ವಾಸನೆಯು ನಾಶವಾಗುತ್ತದೆ. ಯಾರಿಗೆ ಊಟವಾದ ಕೂಡಲೇ ವಾಂತಿಯಾಗುವ ತೊಂದರೆಯು ಇರುತ್ತದೆಯೋ ಅವರು ನಿಂಬೆಹಣ್ಣಿನ ರಸವನ್ನು ಊಟವೊಡನೆ ಉಪಯೋಗಿಸುವುದಲ್ಲದೆ ಸಾಯುಂಕಾಲ ದಲ್ಲಿ ಎರಡು ತೊಲಗಳಷ್ಟು ಕೇವಲ ರಸವನ್ನೇ ಕುಡಿಯಬೇಕು. ನಿಂಬೆ ಹಣ್ಣಿನ ರಸದಲ್ಲಿ ರಕ್ತಶುದ್ಧಿಯನ್ನುಮಾಡುವ ವಿಶೇಷ ಗುಣವಿರುವುದ ರಿಂದ ರಕ್ತದೋಷಣೆಯಿಂದಾಗುವ ಕಜ್ಜಿ, ತುರಿ, ತದ್ದು, ಮುಂತಾದು ವುಗಳಿಂದ ತೊಂದರೆಯನ್ನನುಭವಿಸುವವರು ಹುಣಸೆಹಣ್ಣಿಗೆ ಬದಲಾಗಿ,

ಊಟಕ್ಕೆ ನಿಂಬೆಹಣ್ಣನ್ನೇ ಕೆಲವು ಕಾಲದ ವರೆಗೆ ಉಪಯೋಗಿಸುತ್ತಿರಬೇಕು. ಇದರ ಜತೆಗೆ ಔಷಧಿಯರೂಪದಿಂದ ಸೊಗದೇಬೇರಿನ ಕಷಾಯಕ್ಕೆ ಸಕ್ಕರೆಯನ್ನು ಹಾಕಿ ಎಳೆಪಾಕದಿಂದ ಸಿದ್ಧಗೊಳಿಸಿರುವ ತರಬತ್ತನ್ನು ಕುಡಿಯಬಹುದು ಮತ್ತು ಸ್ನಾನಕಾಲದಲ್ಲಿ ಇದೇ ಪುಸ್ತಕದ ೯೬ನೆಯ ಪುಟದ ೧೦ನೆಯ ಪ್ರಯೋಗದಲ್ಲಿ ಕಾಣಿಸಿರುವ ಸ್ನಾನದ ಚೂರ್ಣವನ್ನೇ ಸಾಬೂನಿಗೆ ಬದಲಾಗಿ ಉಪಯೋಗಿಸುತ್ತಿದ್ದರೆ ಚರ್ಮರೋಗವು ಬಹುಬೇಗನೆ ನಿವಾರಣೆಯಾಗಿ ರಕ್ತವು ಶುದ್ಧವಾಗುತ್ತದೆ.

೧. ನಿಂಬೆಹಣ್ಣಿನ ರಸಕ್ಕೆ ಸಕ್ಕರೆಯನ್ನು ಹಾಕಿ ಕಾಯಿಸಿ ಎಳೆಯಪಾಕ ಬಂದನಂತರ ಶೋಧಿಸಿಕೊಂಡು ಸೀಸೆಯಲ್ಲಿಟ್ಟುಕೊಳ್ಳಬೇಕು. ಈ ತರಬತ್ತನ್ನು ನೀರಿನೊಡನೆ ಕೂಡಿಸಿ ಕುಡಿಯುವುದರಿಂದ ಪಿತ್ತದ ವಿಕಾರವು ಶಾಂತವಾಗುವುದಲ್ಲದೆ ದಣುವು, ಬಾಯಾರಿಕೆ, ವಾಕರಿಕೆಗಳು ಕಡಿಮೆಯಾಗುತ್ತದೆ ಈ ತರಬತ್ತು ನಿಂಬೆಹಣ್ಣಿನ ಅಭಾವದ ಕಾಲದಲ್ಲಿ ಉಪಯೋಗಿಸಲು ಅನುಕೂಲವಾಗಿರುತ್ತದೆ.

೨. ನಿಂಬೆಹಣ್ಣಿನ ರಸದಲ್ಲಿ ಶುದ್ಧವಾದ ಸ್ವಲ್ಪ ಜೇನುತುಪ್ಪ ಮತ್ತು ಸ್ವಲ್ಪ ಪಚ್ಚಕರ್ಪೂರವನ್ನು ಸೇರಿಸಿ ಕಣ್ಣುಗಳಿಗೆ ಅಂಜನವನ್ನು ಹಚ್ಚುತ್ತಿದ್ದರೆ ಕಣ್ಣಿನ ಜ್ಯೋತಿಯು ಹೆಚ್ಚುವುದಲ್ಲದೆ ರಾತ್ರಿಯ ಅಂಧತ್ವವೂ ನಿವಾರಣೆಯಾಗುತ್ತವೆ.

೩. ಜೀರಿಗೆ ಅಥವಾ ಓಮದ ಕಾಳುಗಳನ್ನು ತಂದು ಸ್ವಚ್ಛಮಾಡಿ ಒಂದು ಗಾಜಿನ ಅಥವಾ ಮಣ್ಣಿನ ಪಾತ್ರೆಯಲ್ಲಿ ಹಾಕಿ ಅದಕ್ಕೆ ಹಣ್ಣಿನ ರಸವನ್ನು ಕಾಳು ಮುಳುಗುವಷ್ಟು ಹಾಕಬೇಕು ಮತ್ತು ಕಾಳಿನ ಕಾಲು ಭಾಗದಷ್ಟು ಸೈಂಧವಲವಣದ ಪುಡಿಯನ್ನು ಹಾಕಬೇಕು. ಇದನ್ನು ಒಂದು ಕಡೆ ಮುಚ್ಚಿಟ್ಟಿದ್ದು ರಸವು ಇಂಗಿದನಂತರ ಆ ಕಾಳು ಅಥವಾ ಜೀರಿಗೆಯನ್ನು ಹೊರಗೆ ತೆಗೆದು ನೆರಳಿನಲ್ಲಿ ಆರಿ ಹಾಕಬೇಕು. ಹಸಿಯು ಸ್ವಲ್ಪ ಆರಿದನಂತರ ಪುನಃ ಇದೇ ರೀತಿಯಾಗಿ ರಸ ಮತ್ತು ಉಪ್ಪಿನೊಡನೆ ಓಮ ಅಥವಾ ಜೀರಿಗೆಯನ್ನು

ಹಾಕಿ ಯಥಾಪ್ರಕಾರವಾಗಿ ಅರಿಸಬೇಕು. ಹೀಗೆ ೩ ಅಥವಾ ೭ ಸಲ ರಸದ ಭಾವನೆಯನ್ನು ಕೊಟ್ಟು ಸಿದ್ಧಮಾಡಿಕೊಂಡರೆ ಸಕಲ ವಿಧ ಉದರ ವಿಕಾರಗಳಿಗೆ ವಿಶೇಷ ಲಾಭವುಂಟಾಗುತ್ತದೆ. ಇದು ಕುಟುಂಬದ ಔಷಧವಾಗಿದೆ. ಇದರಿಂದ ಮಂದಾಗ್ನಿ, ಅಜೀರ್ಣ, ಹೊಟ್ಟೆಯುಬ್ಬರ ಅಜೀರ್ಣದ ಭೇದಿ, ಹುಳಿತೇಗು, ಹೊಟ್ಟೆನೋವು, ಹೊಟ್ಟೆತೊಳೆ, ಹಸಿವಾಗದಿರುವುದು, ಮುಂತಾದ ಸಕಲವಿಧ ಉದರ ರೋಗಗಳೂ ಶಾಂತವಾಗುತ್ತವೆ. ಅಂಗಡಿಯ ನಾನಾತರಹದ ಸಾಲ್ಟುಗಳಿಗಾಗಿ ಹಣವನ್ನು ಸುರಿಯುತ್ತಿರುವ ಜನಗಳು ದಯವಿಟ್ಟು ವಿಶೇಷ ಖರ್ಚಿಲ್ಲದ ಈ ಮನೆಗಂಡ ಔಷಧಿಯನ್ನು ಮಾಡಿಟ್ಟುಕೊಂಡು ಗುಣವನ್ನು ಪರೀಕ್ಷಿಸಬಹುದು. ಆವಶ್ಯಕ ಬಿದ್ದಾಗ ಈ ಕಾಳುಗಳನ್ನು ತಿಂದು ಬಿಸಿನೀರನ್ನೋ ಅಥವಾ ಮಜ್ಜಿಗೆಯನ್ನೋ ಕುಡಿಯಬಹುದು ಅಥವಾ ಇದನ್ನು ಕುಟ್ಟಿ ಚೂರ್ಣಮಾಡಿಟ್ಟುಕೊಂಡಾದರೂ ಉಪಯೋಗಿಸಬಹುದು.

೪. ನಿಂಬೆಗಿಡದ ಬೇರನ್ನು ಮತ್ತು ಹೂವನ್ನು ಅರೆದು ಅಕ್ಕಿ ತೊಳೆದ ನೀರಿನೊಡನೆ ಕುಡಿಯುವುದರಿಂದ ಮೂತ್ರ, ಮಲದ್ವಾರಗಳಿಂದ ಮತ್ತು ಬಾಯಿಯಿಂದ ಬೀಳುವ ರಕ್ತವು ನಿಲ್ಲುತ್ತದೆ. ಮೂಗಿನಿಂದಲೂ ರಕ್ತವು ಬೀಳುತ್ತಿದ್ದರೆ ಇದೇ ನೀರನ್ನು ಮೂಗಿಗೂ ಬಿಡಬೇಕು.

೫. ಒಂದು ಜಾಕಾಯಿಯನ್ನು ತಂದು ಚಾಕಿನಿಂದ ತೂತುಮಾಡಿ ಅದರಲ್ಲಿ ನಾಲ್ಕುಗುರುಗಂಜಿಗಳ ತೂಕದ ಅಫೀಮನ್ನು ಇಟ್ಟು ಬಿಡಿ, ಅನಂತರ ಒಂದು ದಪ್ಪ ನಿಂಬೆಹಣ್ಣನ್ನು ಎರಡು ಭಾಗ ಮಾಡಿರಿ, ಒಂದರಲ್ಲಿ ಹಳ್ಳಮಾಡಿ ಆ ಹಳ್ಳದಲ್ಲಿ ಈ ಜಾಕಾಯಿಯನ್ನಿಟ್ಟು ಮತ್ತೊಂದು ಹೋಳಿನಿಂದ ಮುಚ್ಚಿಬಿಡಿ, ಆ ನಿಂಬೆಹಣ್ಣಿಗೆ ಕೆಮ್ಮಣ್ಣುಬಟ್ಟೆಯ ಮುದ್ರೆಯನ್ನು ಮಾಡಿ ಕಾಡು ಬೆರಣೆ ಅಥವಾ ಊರು ಬೆರಣಿಗಳ ಮಧ್ಯದಲ್ಲಿಟ್ಟು ಬೇಯಿಸಿರಿ, ಬೆಂದು ಕೆಂಪಾದಮೇಲೆ ಅದನ್ನು ಬೆಂಕಿಯಿಂದ ತೆಗೆದು ಮಣ್ಣು ಮತ್ತು ನಿಂಬೆಹಣ್ಣನ್ನು ಬೇರೆಮಾಡಿ ಜಾಕಾಯಿಯನ್ನು ಮಾತ್ರ ತೆಗೆದುಕೊಂಡು ಆ ಜಾಕಾಯಿಯನ್ನು ಕಲ್ಬತ್ತಿನಲ್ಲಿ ಹಾಕಿ ಅರೆದು ೧೩ ಮಾತ್ರೆಗಳನ್ನು

ಮಾಡಿ ಕೊಳ್ಳಿ, ನಾಲ್ಕು ನಾಲ್ಕು ಗಂಟೆಗಳ ಅಂತರದಲ್ಲಿ ಒಂದೊಂದು ಅಥವಾ ಎರಡೆರಡು ಮಾತ್ರೆಗಳನ್ನು ನುಂಗಿಸಿರಿ, ಅತಿಸಾರವು ನಿಂತು ಹೋಗುತ್ತದೆ. ಭೇದಿಯು ನಿಂತಕೂಡಲೇ ಔಷಧವನ್ನು ನಿಲ್ಲಿಸಿಬಿಡಿ. ಮಕ್ಕಳಿಗೆ ಮಾತ್ರ ಈ ಔಷಧವನ್ನು ಕೊಡಬೇಡಿ.

೬. ಎರಡು ನಿಂಬೆಹಣ್ಣುಗಳ ರಸವನ್ನು ೪ ತೊಲ ಹಸುವಿನ ಬೆಣ್ಣೆಯೊಡನೆ ಕೂಡಿಸಿ ಕಲ್ಬತ್ತಿನಲ್ಲಿ ಹಾಕಿ ಅರೆಯಿರಿ, ಅದಕ್ಕೆ ಸ್ವಲ್ಪ ನೀರನ್ನು ಹಾಕಿ ೪೮ ಗಂಟೆಗಳ ವರೆಗೆ ಬಿಟ್ಟುಬಿಡಿ, ಅನಂತರ ಆ ತುಪ್ಪವನ್ನು ನೀರಿನಿಂದ ತೊಳೆದು ಪುನಃ ೨ ನಿಂಬೆಹಣ್ಣುಗಳ ರಸ ವನ್ನು ಹಾಕಿ ಮೊದಲಿನಂತೆ ೪೮ ಗಂಟೆಗಳ ವರೆಗೆ ಇಟ್ಟಿರಿ, ಇದು ಎರಡು ಸಲವಾಯಿತು. ಇದರಂತೆ ೨೫ ಸಲ ನಿಂಬೆಯರಸವನ್ನು ಹಾಕಿ ಇಟ್ಟಿದ್ದು ಪುನಃ ತೊಳೆಯಿರಿ, ಈ ಕ್ರಮದಿಂದ ೨೫ ಸಲ ಉದಾಸೀನ ವನ್ನು ಬಿಟ್ಟು ಮಾಡಿಕೊಂಡನಂತರ ಒಂದು ಸೀಸೆಯಲ್ಲಿಟ್ಟು ಕೊಳ್ಳಿ. ಇದರಲ್ಲಿನ ಎರಡು ಗಸಗಸೆಗಳಷ್ಟು ಔಷಧವನ್ನು ನಿತ್ಯದಲ್ಲಿ ಕಣ್ಣಿಗೆ ಹಚ್ಚುವುದರಿಂದ ಕಣ್ಣಿನಲ್ಲಿ ಬೆಳೆದಿರುವ ಮುತ್ತಿನಾಕಾರದ ದುರ್ಮಾಂಸವು ಕರಗುತ್ತದೆ. ಇದನ್ನು ರೋಗದ ಆರಂಭದಲ್ಲಿಯೇ ಹಚ್ಚಬೇಕು. ಪರೀಕ್ಷಿಸಲ್ಪಟ್ಟಿದೆ.

೬. ನಿಂಬೆಹಣ್ಣಿನ ಎರಡು ತೊಲ ರಸದಲ್ಲಿ ಅರ್ಧ ತೊಲ ಜೇನುತುಪ್ಪ ಮತ್ತು ಕಾಲು ತೊಲ ಕರಿಯ ಉಪ್ಪನ್ನು ಸೇರಿಸಿ ಕುಡಿ ಯುವುದರಿಂದ ಬಿಕ್ಕಳಿಕೆಯು ನಿಲ್ಲುತ್ತದೆ.

೭. ಚೇಳು ಕಡಿದ ಕೂಡಲೇ ನಿಂಬೆಯ ಹಣ್ಣಿನ ಹೋಳಿ ನಿಂದ ಕಡಿದಿರುವ ಭಾಗವನ್ನು ಉಜ್ಜಿದರೆ ವಿಷವು ಇಳಿಯುತ್ತದೆ.

೮. ನಿಂಬೆಹಣ್ಣಿನ ರಸದಲ್ಲಿ ಜಾಪಾಳದ ಬೀಜವನ್ನು ತೇಯ್ದು ಕಣ್ಣುಗಳಿಗೆ ಅಂಜನವನ್ನು ಹಚ್ಚುವುದರಿಂದ ಸರ್ಪದ ವಿಷವು ಇಳಿಯುತ್ತದೆ.

೯. ಮೂರು ನಿಂಬೆಹಣ್ಣುಗಳ ರಸದಲ್ಲಿ ||| ತೊಲ ಮೆಣಸು ಮತ್ತು ||| ತೊಲ ಜಾಪಾಳದ ಬೀಜಗಳನ್ನು ಅರೆದು ಮೆಣಸಿನಷ್ಟು ಮಾತ್ರೆಗಳನ್ನು ಮಾಡಿಟ್ಟುಕೊಳ್ಳಿ, ಒಂದು ಅಥವಾ ಎರಡು ಮಾತ್ರೆ

ಗಳೆಸ್ನು ನೀರಿನೊಡನೆ ಅರೆದು ಹಾವು ಕಚ್ಚಿದ ಮನುಷ್ಯನ ಕಣ್ಣುಗಳಿಗೆ ಅಂಜನದಂತೆ ಹಚ್ಚಿರಿ. ಇವೇ ೨-೩ ಮಾತ್ರೆಗಳನ್ನು ನುಂಗಿಸಿರಿ ಅವಶ್ಯವಾಗಿ ವಿಷವು ಇಳಿಯುತ್ತದೆ. ಈ ಪ್ರಯೋಗವು "ಇಲಾಜುಲ್ ಗುರ್ಬಾ" ಎಂಬ ಯುನಾನೀ ಚಿಕಿತ್ಸಾ ಗ್ರಂಥದಲ್ಲಿದೆ.

೧೦. ನಿಂಬೆಯ ಎಲೆಗಳನ್ನು ಕುಟ್ಟಿ ರಸವನ್ನು ತೆಗೆದು ಅದರಲ್ಲಿ ಜೇನುತುಪ್ಪವನ್ನು ಕೂಡಿಸಿ ಕುಡಿಯುವುದರಿಂದ ಹೊಟ್ಟೆಯಲ್ಲಿನ ಜಂತುಗಳು ಸಾಯುತ್ತವೆ.

೧೧. ನಿಂಬೆಹಣ್ಣಿನ ರಸದೊಡನೆ ಹಿಂಗು ಮತ್ತು ಹರದಾಳವನ್ನು ಸಮವಾಗಿ ಅರೆದು ಗುಳಿಗೆಗಳನ್ನುಮಾಡಿ ಇಟ್ಟುಕೊಳ್ಳಬೇಕು. ಚೇಳು ಕಡಿದಾಗ ಒಂದು ಗುಳಿಗೆಯನ್ನು ನೀರಿನಲ್ಲಿ ತೇಯ್ದು ಕಡಿದ ಸ್ಥಳಕ್ಕೆ ಹಚ್ಚಬೇಕು ಮತ್ತು ಇದನ್ನೇ ಕಣ್ಣುಗಳಿಗೂ ಹಚ್ಚಬೇಕು. ಇದರಿಂದ ವಿಷವು ಅವಶ್ಯವಾಗಿ ಇಳಿಯುತ್ತದೆ

೧೨. ನಿಂಬೆಹಣ್ಣನ್ನು ಉಪಯೋಗಿಸಿದನಂತರ ಬೀಜವನ್ನು ಬಿಸಾಡಬೇಡಿ ಒಂದು ಕಡೆ ಹಾಕಿರಿ. ಯಾವ ವಿಷದ ಜಂತುವಾದರೂ ಕಡಿಯಲಿ ಆ ಕೂಡಲೇ ಒಂದು ತೊಲ ಬೀಜವನ್ನುತಿಂದುಬಿಡಿ ಅಥವಾ ನೀರಿನೊಡನೆ ಅರೆದು ಕುಡಿಯಿರಿ. ಮತ್ತು ಇದನ್ನೇ ಕಡಿದ ಸ್ಥಳಕ್ಕೆ ಹಚ್ಚಿರಿ ಅಥವಾ ಒಂದು ತೊಲ ಪಟಕವನ್ನು ನುಣ್ಣಗೆ ಅರೆದು ಹಾವಿನಿಂದ ಕಡಿಯಲ್ಪಟ್ಟ ಮನುಷ್ಯನಿಗೆ ತಿನ್ನಿಸಿಬಿಡಿ. ಇದರಿಂದ ಬಹಳ ಉಪಕಾರವಾಗುತ್ತದೆ. ಏಕೆಂದರೆ? ಈ ಚಿಕಿತ್ಸೆಯಿಂದ ಶರೀರದ ರಕ್ತವು ಒಡೆದು ಹೋಗುತ್ತದೆ ಮತ್ತು ಸಂಪೂರ್ಣ ಶರೀರದಲ್ಲಿ ಶೀಘ್ರವಾಗಿ ರಕ್ತವು ಹಬ್ಬುವುದಿಲ್ಲ. ಅಥವಾ

ಹಾವು ಕಡಿದ ಕೂಡಲೇ ತಡಮಾಡದೆ ಕಾಲು ತೊಲ ಅಥವಾ ಸ್ವಲ್ಪ ಹೆಚ್ಚಾದರೂ ಸರಿಯೇ ನವಾಸಾಗರವನ್ನು ನುಣ್ಣಗೆ ಅರೆದು ಸ್ವಲ್ಪ ತಣ್ಣೀರಿನಲ್ಲಿ ಕದರಿ ಕುಡಿಸಿಬಿಡಿ ಮತ್ತು ನಾಲ್ಕೈದು ಜನಗಳು ಆ ಮನುಷ್ಯನನ್ನು ಬಿಗಿಯಾಗಿ ಹಿಡಿದುಕೊಂಡು 'ಎಮೋನಿಯಾ' ವನ್ನುಮೂಸಿ ನೋಡಿಸಿಬಿಡಿ ಈಶ್ವರನ ದಯೆಯಿಂದ ಸುಖವುಂಟಾಗುತ್ತದೆ. ಈ ಹೆಸರಿನ ಔಷಧಿಯು ನಿಮಗೆ ಸಮಯಕ್ಕೆ ಸಿಕ್ಕದಿದ್ದರೆ

ನವಾಸಾಗರ ಮತ್ತು ಸುಣ್ಣವನ್ನು ಕೂಡಿಸಿ ಒಂದು ಸೀಸೆಯಲ್ಲಿ ಹಾಕಿ ಭದ್ರವಾಗಿ ಬಿರಿಟಿನಿಂದ ಮುಚ್ಚಿಟ್ಟಿದ್ದು ಮೂಸಿ ನೋಡಿಸಿರಿ.

ಕಾಶಿಯಲ್ಲಿ ನಾನು ಅಧ್ಯಯನ ಮಾಡುತ್ತಿರುವಾಗ ಒಂದು ಬೇಸಿಗೆಯ ರಜದಲ್ಲಿ ನನ್ನ ಮಿತ್ರರೊಡನೆ ಹಳ್ಳಿಯ ಸಂಚಾರಕ್ಕೆ ಹೋಗಿದ್ದಾಗ ನನ್ನ ಒಬ್ಬ ಪಂಜಾಬೀ ಮಿತ್ರರು ಆಶ್ಚರ್ಯಕರವಾದ ಒಂದು ಕೆಲಸವನ್ನು ಮಾಡಿ ತೋರಿಸಿದರು ಅದನ್ನು ಪಾಠಕರ ಉಪಯೋಗಕ್ಕಾಗಿ ಇಲ್ಲಿ ಬರೆಯುವುದಾಗುತ್ತದೆ.

ದಾರಿಯಲ್ಲಿ ಒಂದು ಹುತ್ತವು ಕಾಣಿಸಿತು ಕೂಡಲೇ ಆ ನನ್ನ ಸ್ನೇಹಿತರು ಹುತ್ತದೊಳಕ್ಕೆ ಕೈಯನ್ನು ಹಾಕಿ ಸುಮಾರು ನಾಲ್ಕು ಅಡಿಗಳ ಉದ್ದವಾದ ಒಂದು ದೊಡ್ಡ ಸರ್ಪವನ್ನು ಇಲಿಯನ್ನೆಳೆಯುವಂತೆ ಎಳೆದು ಹೊರಕ್ಕೆ ತೆಗೆದರು. ಎಷ್ಟು ಯತ್ನಮಾಡಿದರೂ ಸರ್ಪವು ಹೆಡೆಯನ್ನು ಎತ್ತಲೇ ಇಲ್ಲ. ಅದರ ಬಾಯನ್ನು ತೆರೆದು ಒಳಕ್ಕೆ ಬೆರಳನ್ನು ಇಟ್ಟರೂ ಸುಮ್ಮನಿದ್ದಿತು. ಇದೇ ರೀತಿಯಾಗಿ ನಿತ್ಯದಲ್ಲಿ ಹೋದ ಕಡೆಯಲ್ಲೆಲ್ಲಾ ವಿನೋದವು ನಡೆಯುತ್ತಿದ್ದಿತು. ಯಾವ ಸರ್ಪವು ಅತಿ ವೇಗದಿಂದ ಬುಸುಗುಟ್ಟುತ್ತಾ ಹೆಡೆಯನ್ನು ಎತ್ತಿಕೊಂಡು ಬಂದರೂ ಆ ಮಿತ್ರರ ಸ್ಪರ್ಶದಿಂದ ತಣ್ಣಗಾಗಿಬಿಡುತ್ತಿದ್ದಿತು. ಆಶ್ಚರ್ಯ ಚಕಿತರಾದ ನಾವೆಲ್ಲರೂ ಅವರನ್ನು ಕೇಳಲು ಅವರು “ನಾನು ಇಪ್ಪತ್ತು ವರ್ಷಗಳಿಂದಲೂ ಒಂದು ದಿವ್ಯೌಷಧವನ್ನು ಬಾಯಲ್ಲಿಯೇ ಇಟ್ಟುಕೊಂಡಿರುತ್ತೇನೆ ನನ್ನ ಬೆವರಿನ ವಾಸನೆಯಿಂದಲೇ ಸರ್ಪವು ಓಡಿಹೋಗುತ್ತದೆ. ಹಾವಿನ ವಿಷವನ್ನು ಇಳಿಸುವುದಕ್ಕಾಗಿ ನನ್ನ ಬಾಯಿಯ ಜೊಲ್ಲೇ ಸಾಕು” ಎಂದು ಹೇಳಿದರು. ಆ ಪ್ರಾಂತದಲ್ಲಿ ಅನೇಕರನ್ನು ವಿಚಾರಿಸಲಾಗಿ ಇವರು ಹಾವು ಕಚ್ಚಿದ ಸ್ಥಳವನ್ನು ಬಾಯಿಂದ ಕಚ್ಚಿ ವಿಷವನ್ನು ಹೀರಿ ತೆಗೆದು ಹಾಕುತ್ತಾರೆಂತಲೂ ಹೇಳಿದರು.

ಒಂದು ತಿಂಗಳ ವರೆಗೆ ಆ ಪಂಜಾಬೀ ಮಿತ್ರರನ್ನು ಆಶ್ರಯಿಸಿ ನಾನಾ ವಿಧವಾಗಿ ಉಪಚರಿಸಿದನಂತರ ಆ ದಯಾಳುಗಳು ಬಾಯ್ಬಿಟ್ಟು ಹೇಳಿದರು. ಆ ಪ್ರಯೋಗವನ್ನು ಡೆಲ್ಲಿಯ ನಿವಾಸಿಗಳಾದ

ಆಚಾರ್ಯ ಚತುರಸೇನಶಾಸ್ತ್ರಿಗಳು ಹತ್ತು ಹದಿನೈದು ಸಲ ಪ್ರಯೋಗಿಸಿ ಪರೀಕ್ಷಿಸಲಾಗಿ ಒಂದೂ ಖಾಲಿಯಾಗಲಿಲ್ಲ ಎಲ್ಲರೂ ಗುಣಹೊಂದಿದರು. ಯಾರು ಬೇಕಾದರೂ ತಯಾರ್ಮಾಡಿಟ್ಟುಕೊಂಡು ಪರೀಕ್ಷಿಸಬಹುದು. ಸಮಯಕ್ಕೆ ಸರಿಯಾಗಿ ಹಳ್ಳಿಯ ನಿವಾಸಿಗಳಿಗೆ ದೊರೆಯುವಂತೆ ಮಾಡಬೇಕಾದುದು ಅತ್ಯಾವಶ್ಯಕವಾಗಿರುತ್ತದೆ.

ಔಷಧ:—ಅಂಟುವಾಳದ ಕಾಯಿ (ಬಟ್ಟೆಯನ್ನು ತೊಳೆಯಲು ಉಪಯೋಗಿಸುವುದು) ೨, ಗುರುಗಂಜಿ ೫, ನವಾಸಾಗರ ೮ ಗುರುಗಂಜಿಗಳ ತೂಕ, ಉತ್ತಮವಾದ ರೇಷ್ಮೆಯ ಬಟ್ಟೆ ೧ ತೊಲ, ಇವುಗಳನ್ನು ಸಿದ್ಧಮಾಡಿಟ್ಟುಕೊಂಡು, ಮೇಲಿನ ಮೂರು ಪದಾರ್ಥಗಳನ್ನೂ ರೇಷ್ಮೆಯ ಬಟ್ಟೆಯಲ್ಲಿ ಸುತ್ತಿ ರೇಷ್ಮೆಯ ದಾರದಿಂದ ಗಟ್ಟಿಯಾಗಿ ಕಟ್ಟಿ, ಹೊಗೆಯು ಇಲ್ಲದಿರುವ ಇದ್ದಲಿನ ಕೆಂಡದ ಮೇಲೆ ಇಟ್ಟು ಸುಡಬೇಕು; ಹೊಗೆಯಾಡುವುದು ನಿಂತಕೂಡಲೇ ಬಹು ಸಾವಧಾನದಿಂದ ಆ ಗಂಟನ್ನುಹೊರಕ್ಕೆ ತೆಗೆದುಕೊಂಡು ಅರೆದು ಮೂರು ಭಾಗ ಮಾಡಬೇಕು; ಒಂದೊಂದು ಭಾಗವನ್ನು ತುಪ್ಪದಿಂದ ಕಲಿಸಿ ಗಂಟೆಗೊಂದು ಸಲದಂತೆ ಮೂರು ಸಲ ಕೊಡಬೇಕು; ಔಷಧದಲ್ಲಿನ ಸ್ವಲ್ಪ ಭಾಗವನ್ನು ಹಾವು ಕಚ್ಚಿರುವ ಸ್ಥಳಕ್ಕೂ ಹಚ್ಚಬೇಕು. ಈಶ್ವರನ ಕೃಪೆಯಿಂದ ಖಂಡಿತವಾಗಿ ಗುಣವಾಗುತ್ತದೆ.

ನಿಂಬೆಹಣ್ಣಿನ ಜಾತಿಯಲ್ಲಿಯೇ ದಪ್ಪವಾಗಿ ಬೆಳೆಯುವ ಮತ್ತೊಂದು ವಿಧದ ಕಾಯಿಯು ‹‹ಏರಳಿ ಹಣ್ಣು'' ಎಂದು ಪ್ರಸಿದ್ಧವಾಗಿದೆ. ಇದನ್ನು ಜನಗಳು ಉಪ್ಪಿನಕಾಯಿಗೆ ಉಪಯೋಗಿಸುವುದೇ ಹೆಚ್ಚಾಗಿದೆ. ಇದರ ಉಪ್ಪಿನಕಾಯಿಯು ವಿಶೇಷ ಗುಣಕಾರಿಯಾಗಿರುತ್ತದೆ. ರೋಗಿಗಳಿಗೆ ಸಾಮಾನ್ಯವಾಗಿ ಈ ಉಪ್ಪಿನಕಾಯಿಯನ್ನು ಕೊಡುವ ರೂಢಿಯುಂಟು. ಇದು ಪಿತ್ತವನ್ನು ಶಾಂತಿಗೊಳಿಸುವುದಾಗಿದೆ. ಇದರ ಹುಳಿಯಿಂದ ಕೆಲವು ಸಂದರ್ಭಗಳಲ್ಲಿ ಚಿತ್ರಾನ್ನವನ್ನೂ ಮಾಡುವುದುಂಟು. ಇದರ ರಸಕ್ಕೆ ಸಕ್ಕರೆಯನ್ನು ಹಾಕಿ ಎಳೆಪಾಕವನ್ನು ಮಾಡಿಟ್ಟುಕೊಂಡು ಪ್ರತಿದಿನ ಸೇವಿಸುತ್ತಿದ್ದರೆ ಬಹಳ ಮಟ್ಟಿಗೆ ಪಿತ್ತಶಾಂತಿಯಾಗುವುದು. ಅಥವಾ ಏರಳಿಹಣ್ಣಿನ ರಸ ಮತ್ತು

ತುಂಡಿಯರಸ ಇವೆರಡು ರಸಗಳನ್ನೂ ಸೇರಿಸಿ ಸಕ್ಕರೆಯನ್ನು ಹಾಕಿ ಪಾಕವನ್ನು ಮಾಡಿಟ್ಟುಕೊಳ್ಳಲೂ ಬಹುದು ಇದರ ಸೇವನೆಯಿಂದ ವಾಂತಿ, ತಲೆ ತಿರುಗುವಿಕೆ ಮುಂತಾದ ಪಿತ್ತ .ವಿಕಾರಗಳು ಶಾಂತವಾಗುತ್ತವೆ. ಈ ಹಣ್ಣಿನಲ್ಲಿ ಪಿತ್ತನಾಶಕ ಗುಣವು ಹೆಚ್ಚಾಗಿದೆ.

---

ಹಲಸಿನ ಹಣ್ಣು :— ಸುಪಕ್ವವಾಗಿರುವ ಈ ಹಣ್ಣು ವಾತ ಪಿತ್ತಗಳ ವಿಕಾರಗಳನ್ನು ಶಾಂತಗೊಳಿಸಿ ಬಲ-ರಕ್ತ-ವೀರ್ಯಗಳನ್ನು ಹೆಚ್ಚಿಸುವುದು, ನರಗಳಿಗೆ ಬಲವನ್ನೀಯುವುದು, ಹೆಚ್ಚಾಗಿ ತಿನ್ನುವುದರಿಂಧ ಅಜೀರ್ಣ, ಅಂಡವಾಯು, ಮಂದಾಗ್ನಿ, ಹೊಟ್ಟೆ ನೋವು, ದಾಹ, ಇವುಗಳು ಸಂಭವಿಸುತ್ತವೆ. ಮತ್ತು ಕಫವು ವೃದ್ಧಿಯಾಗುತ್ತದೆ. ಎಳೆಯ ಹಲಸನ್ನು ತರಕಾರಿಯ ರೂಪದಿಂದ ಯಾವಾಗಲಾದರೂ ಉಪಯೋಗಿಸುವುದುಂಟು. ಈ ತರಕಾರಿಯು ಪಿತ್ತವನ್ನು ಶಾಂತಗೊಳಿಸುವುದು, ವಾತ, ಕಫ, ಮೇದಸ್ಸು, (ಕೊಬ್ಬು) ಇವುಗಳನ್ನು ಹೆಚ್ಚಿಸುವುದು, ಬಲ-ವೀರ್ಯಗಳನ್ನು ಬಲಪಡಿಸುವುದು, ಬಹಳ ತಡವಾಗಿ ಜೀರ್ಣಿಸುವುದು, ಗುಲ್ಮ, ಶ್ಲೇಷ್ಮ, ಅಗ್ನಿಮಾಂದ್ಯಗಳ ತೊಂದರೆಯುಳ್ಳವರು ಇದನ್ನು ತಿನ್ನಲೇ ಬಾರದು.

ಹಲಸಿನ ಬೀಜ—ವೀರ್ಯದ ವೃದ್ಧಿಯನ್ನುಂಟುಮಾಡುವುದು, ಮಲ ಮೂತ್ರಗಳನ್ನು ಸಡಲಿಸುವುದು, ಪಿತ್ತವನ್ನು ಹೆಚ್ಚಿಸುವುದು ಮತ್ತು ಬೇಗನೆ ಜೀರ್ಣವಾಗುವುದಿಲ್ಲ.

ಹಲಸಿನ ಮರದ ಬೇರನ್ನು ತಂದು ಕುಟ್ಟಿ ನೀರಿನಲ್ಲಿ ಹಾಕಿ ಕಾಯಿಸಿ ಶೋಧಿಸಿಕೊಂಡು ಮೂಗಿನ ರಂಧ್ರಗಳಿಗೆ ಕೆಲವು ಹನಿಗಳನ್ನು ಹಾಕಿದರೆ ಶೀತದಿಂದುಂಟಾಗಿರುವ ತಲೆನೋವು ನಿಲ್ಲುತ್ತದೆ.

---

ಸೀಬೆಹಣ್ಣು:—ಶೀತಗುಣವುಳ್ಳದು, ಜೀರ್ಣಕಾರಿ, ರುಚಿಕರವಾದುದು, ಉಷ್ಣ ಪ್ರಕೃತಿಯುವರ ಹೃದಯಕ್ಕೆ (Heart) ಬಲವನ್ನು ಕೊಡತಕ್ಕುದು, ವಾತ ಪ್ರಕೃತಿಯವರಿಗೆ ಹೊಟ್ಟೆ ಮತ್ತು ತಲೆಯ ನೋವನ್ನುಂಟುಮಾಡತಕ್ಕುದು. ಈ ಹಣ್ಣನ್ನು ಹೆಚ್ಚಾಗಿ ತಿನ್ನುವುದ

ರಿಂದ ವಾಯುವು ಹೊಟ್ಟೆಯಲ್ಲಿ ಸೇರಿ ಹೊಟ್ಟೆಯ ಉಬ್ಬರ, ನೋವು ಮುಂತಾದುವುಗಳನ್ನುಂಟುಮಾಡುವುದು. ಪಿತ್ತ ಪ್ರಕೃತಿಯವರಿಗೆ ಹಿತಕರವಾಗಿದೆ ಮತ್ತು ಉನ್ಮಾದ (ಹುಚ್ಚು) ರೋಗವುಳ್ಳವರ ಬುದ್ಧಿ ವಿಕಾರವನ್ನು ಶಾಂತಗೊಳಿಸುತ್ತದೆ. ಈ ಹಣ್ಣನ್ನು ಎಂದಾದರೂ ಮಿತವಾಗಿ ತಿನ್ನಬೇಕಲ್ಲದೆ ಇತರ ಹಣ್ಣುಗಳಂತೆ ವಿಶೇಷವಾಗಿ ತಿನ್ನ ಬಾರದು. ಅತಿಯಾಗಿ ತಿನ್ನುವುದರಿಂದ ಜ್ವರವು ಬರುವ ಸಂಭವವೂ ಉಂಟು. ಇದರ ಬೀಜಗಳು ಮೂಲವ್ಯಾಧಿಯನ್ನುಂಟುಮಾಡುತ್ತವೆ ಇದರಲ್ಲಿ ಕೆಂಪು ಮತ್ತು ಬಿಳುಪು ಬಣ್ಣದ ಎರಡು ಜಾತಿಗಳಿವೆ. ರುಚಿಯಲ್ಲಿ ಸ್ವಲ್ಪ ಭೇದವಿದ್ದರೂ ಗುಣದಲ್ಲಿ ಯಾವ ಭೇದವೂ ಇಲ್ಲ.

೧. ಬಹಳ ಪಕ್ವವಾಗದಿರುವ ಸೀಬೆಯ ಹಣ್ಣನ್ನು ತಂದು ಬೀಜಗಳನ್ನು ತೆಗೆದು ಸಣ್ಣಗೆ ಕತ್ತರಿಸಿ ಆ ಚೂರುಗಳನ್ನು ಸ್ವಲ್ಪ ಹುರಿದು ಉಪ್ಪನ್ನು ಕೂಡಿಸಿ ತಿನ್ನುವುದರಿಂದ ನೆಗಡಿ ಮತ್ತು ಅದರಿಂದುಂಟಾಗಿರುವ ಕೆಮ್ಮಲು ಶಾಂತವಾಗುತ್ತದೆ.

ಈ ಹಣ್ಣನ್ನು ಯಾವಾಗ ತಿನ್ನಬೇಕಾಗಿದ್ದರೂ ಉಪ್ಪನ್ನು ಸೇರಿಸಿ ತಿನ್ನುವುದೇ ಉತ್ತಮವಾಗಿದೆ. ಇದರಿಂದ ಹಣ್ಣಿನಲ್ಲಿರುವ ದೋಷವು ಬಹಳ ಮಟ್ಟಿಗೆ ಕಡಿಮೆಯಾಗುತ್ತವೆ. ಕಾಶಿಯ ಕಡೆ ಇದನ್ನು ಉಪ್ಪಿನೊಡನೆ ತಿನ್ನುವ ರೂಢಿಯೇ ಹೆಚ್ಚಾಗಿದೆ ಅಲಹಾಬಾದ್ ಮತ್ತು ಕಾಶಿಯಲ್ಲಿ ಈ ಹಣ್ಣು ಬಹಳ ಹೆಚ್ಚಾಗಿ ಬೆಳೆಯುತ್ತದೆ. ಮತ್ತು ಬಹಳ ದೊಡ್ಡದಾಗಿದ್ದು ಬಹು ರುಚಿಕರವಾಗಿರುತ್ತದೆ. ಇದರ ಹೂವು ತ್ರಿದೋಷನಾಶಕವಾಗಿದೆ ಮತ್ತು ಕಣ್ಣಿನ ರೋಗಗಳನ್ನು ನಾಶಗೊಳಿಸುವುದಾಗಿದೆ.

೨. ಸೀಬೆಯ ಹೂವುಗಳನ್ನು ದಾಳಿಂಬೆಯ ಚಿಗರು ಮತ್ತು ಪಟಿಕದೊಡನೆ ಅರೆದು ರಸವನ್ನು ಹಿಂಡಿ ಕಣ್ಣುಗಳಿಗೆ ಹಾಕುವುದರಿಂದ ಕಣ್ಣುಗಳ ಉರಿ ಮತ್ತು ಕೆಂಪು ಬಣ್ಣವು ಶಾಂತವಾಗುತ್ತದೆ.

೩. ಸೀಬೆಯ ಹೂವು ೧ ತೊಲ, ಗುಲಾಬಿಯ ಹೂವು ೧ ತೊಲ, ಧನಿಯ ೧ ತೊಲ, ಲಾವಂಚ (ಬಾಳದಬೇರು) ೧ ತೊಲ,

ಏಲಕ್ಕಿಕಾಯಿ ೨, ಲವಂಗ ೨, ಮೆಣಸು ೨, ಇವುಗಳನ್ನು ನೀರಿನೊಡನೆ ಅರೆದು ಶೋಧಿಸಿಕೊಂಡು ಸ್ವಲ್ಪ ಸಕ್ಕರೆಯನ್ನು ಸೇರಿಸಿ ಕುಡಿಯುವುದರಿಂದ ಪಿತ್ತದ ವಿಕಾರ, ಹೊಟ್ಟೆಯ ಉರಿ, ಬಾಯಾರಿಕೆ, ಸಂತಾಪ, ಇವುಗಳು ಶಾಂತವಾಗುವುವು ಬೇಕಾದರೆ ಸ್ವಲ್ಪ ನಿಂಬೆಯ ಹಣ್ಣಿನ ರಸವನ್ನೂ ಸೇರಿಸಿಕೊಳ್ಳಬಹುದು.

೪. ಸೀಬೆಯ ಚಿಗರನ್ನು ತಂದು ನೆಲ್ಲಿಯ ಚೆಟ್ಟು, ಧನಿಯ, ಕಚೋರ, ಕಸ್ತೂರಿ ಅರಿಶಿನ ಇವುಗಳನ್ನು ಸಮವಾಗಿ ಸೇರಿಸಿ ಮೊಸರಿನೊಡನೆ ಅರೆದು ಶರೀರಕ್ಕೆ ಹಚ್ಚಿದರೆ ಪಿತ್ತದ ಗಂಡೆಗಳು ಮತ್ತು ನವೆ ಇವೆರಡೂ ಶಾಂತವಾಗುವುವು.

---

**ಸೀತಾಫಲ:**— ಈ ಹಣ್ಣನ್ನು ರೂಢಿಯಲ್ಲಿ "ದುರಂಜಿ ಹಣ್ಣು" ಎಂತಲೂ ಕರೆಯುತ್ತಾರೆ. ಇದು ಮೊದಲು ಸ್ವಲ್ಪ ಉಷ್ಣವನ್ನು ತೋರಿಸಿ ಅನಂತರ ತಂಪನ್ನುಂಟುಮಾಡುವುದು, ರಕ್ತ ಮತ್ತು ವೀರ್ಯವನ್ನು ಹೆಚ್ಚಿಸುವುದು, ಹೃದಯಕ್ಕೆ ಬಲವನ್ನು ಕೊಡುವುದು, ಜೀರ್ಣಶಕ್ತಿಯನ್ನು ಹೆಚ್ಚಿಸುವುದು, ಆದರೂ ಈ ಹಣ್ಣನ್ನು ಅಗ್ನಿಮಾಂದ್ಯವುಳ್ಳವರು ಹೆಚ್ಚಾಗಿ ತಿನ್ನುವುದರಿಂದ ಜ್ವರವು ಬರುವ ಸಂಭವವಿದೆ. ಕ್ರಿಮಿರೋಗ, ಮೇಹವಾಯುಗಳನ್ನು ಶಾಂತಗೊಳಿಸುವುದಾದರೂ ಶ್ಲೇಷ್ಮ ಮತ್ತು ಪಿತ್ತವನ್ನು ಸ್ವಲ್ಪಮಟ್ಟಿಗೆ ಹೆಚ್ಚಿಸುವುದು. ಈ ಹಣ್ಣು ಶರೀರದ ಮಾಂಸವನ್ನು ಬೆಳೆಯಿಸುತ್ತದೆ. ಆದಕಾರಣ ಮಾಂಸಕ್ಷಯದವರಿಗೆ ಹಿತಕರವಾಗಿದೆ.

೧. ಸೀತಾಫಲದ ಎಲೆಗಳನ್ನು ಅರೆದು ಸ್ವಲ್ಪ ಉಪ್ಪನ್ನು ಕೂಡಿಸಿ ಕಟ್ಟುವುದರಿಂದ ಗಡ್ಡೆ, ಕುರಗಳು ಬೇಗನೆ ಕೀವುತುಂಬಿ ಒಡೆಯುತ್ತವೆ. ಉಪ್ಪನ್ನು ಸೇರಿಸದೆ ಕಟ್ಟಲೂಬಹುದು.

೨. ಇದರ ಎಲೆ, ಬೀಜ, ಮತ್ತು ಹಸಿಯ ಕಾಯಿಗಳಲ್ಲಿ ಕ್ರಿಮಿನಾಶಕ ಶಕ್ತಿಯು ಇರುತ್ತದೆ. ಎಲೆಗಳನ್ನು ಅರೆದು ಮೊಸರು ಅಥವಾ ಗೋಮೂತ್ರದೊಡನೆ ಕೂಡಿಸಿ ಹಚ್ಚುವುದರಿಂದ ಪಿತ್ತದ ಗಂಡೆಗಳು ಮತ್ತು ನವೆಯು ಶಾಂತವಾಗುತ್ತದೆ.

೩. ಕೆಲವು ವೇಳೆ ಹೊಟ್ಟೆಯಲ್ಲಿ ಕ್ರಿಮಿ (ಜಂತು) ಗಳು ಸೇರಿ ಅಸಹ್ಯವಾದ ಹೊಟ್ಟೆನೋವು ಬರುವುದುಂಟು ಅಂತಹ ಸಂದರ್ಭ ದಲ್ಲಿ ಸೀತಾಫಲದ ಹಸಿಯ ಕಾಯಿಗಳನ್ನು ಒಣಗಿಸಿ ಚೂರ್ಣಮಾಡಿ ಆ ಚೂರ್ಣಕ್ಕೆ ಸಮವಾಗಿ ಹುರುಳಿಯ ಹಿಟ್ಟನ್ನು ಸೇರಿಸಿ ಪ್ರತಿದಿನದ ಪ್ರಾತಃಕಾಲದಲ್ಲಿ ಒಂದೊಂದು ತೊಲ ಚೂರ್ಣವನ್ನು ಬಿಸಿನೀರಿ ನೊಡನೆ ಸೇವಿಸಬೇಕು ಇದರಿಂದ ಹೊಟ್ಟೆಯಲ್ಲಿನ ಜಂತುಗಳು ಸಾಯುತ್ತವೆ ಮೂರು ನಾಲ್ಕು ದಿನಗಳವರೆಗೆ ಹೀಗೆ ಮಾಡಿ ಒಂದು ದಿನ ಅರಳೆಣ್ಣೆಯನ್ನು ಬಿಸಿ ಹಾಲಿನೊಡನೆ ಕುಡಿಯಬೇಕು. ಈ ಪ್ರಯೋಗದಿಂದ ಹೊಟ್ಟೆಯೊಳಗಿರುವ ಜಂತುಗಳು ಭೇದಿಯ ಮೂಲಕ ಹೊರಬಿದ್ದು ಹೊಟ್ಟೆನೋವು ನಿಲ್ಲುತ್ತದೆ.

೪. ಸೀತಾಫಲದ ಎಲೆಗಳ ಕಷಾಯವನ್ನು ಮಾಡಿ ಮಕ್ಕಳಿಗೆ ಕುಡಿಸಿದರೆ ಅತ್ಯುಷ್ಣದಿಂದ ಹೊರಬಿದ್ದಿರುವ ಆಸನದ ಒಳಭಾಗವು (ಗೂದೆ) ಒಳಗಡೆ ಸೇರುತ್ತದೆ. ಮತ್ತು ಇದೇ ಕಷಾಯವನ್ನೇ ತಣ್ಣ ಗಾದಮೇಲೆ ಹೊರಬಿದ್ದಿರುವ ಭಾಗಕ್ಕೆ ಹಚ್ಚಬಹುದು.

೫. ಇದರ ಎಲೆಗಳನ್ನು ಅರೆದು ನಾರುಹುಣ್ಣಿನ ಮೇಲೆ ಕಟ್ಟಿದರೆ ದಾರವು ಹೊರಬೀಳುತ್ತದೆ.

೬. ಇದರ ಎಲೆಗಳನ್ನು ನೀರು ಹಾಕದೆ ಅರೆದು ಕಟ್ಟು ವುದರಿಂದ ನಾನಾವಿಧ ಹುಣ್ಣುಗಳು ಮಾಯುವುವು.

೭. ಸೀತಾಫಲದ ಎಲೆ ಮತ್ತು ಹೊಗೆಸೊಪ್ಪು ಇವೆರಡನ್ನುಸಮ ಭಾಗದಿಂದ ಸುಟ್ಟು ಆ ಬೂದಿಯನ್ನು ಸುಣ್ಣಕಲ್ಲಿನೊಡನೆ ಅರೆದು ಶೋಧಿಸಿಕೊಂಡು ಆ ಚೂರ್ಣವನ್ನು ಹುಳಗಳು ಬಿದ್ದಿರುವ, ದನ ಗಳ ಹುಣ್ಣುಗಳ ಮೇಲೆ ಹಾಕಿದರೆ ಹುಳುಗಳು ಸಾಯುವುವು ಮತ್ತು, ಹುಣ್ಣುಗಳು ಮಾಯುತ್ತವೆ. ಅಥವಾ ಹಸಿಯ ಎಲೆಗಳನ್ನೇ ನೀರು ಹಾಕದೆ ಅರೆದು ಕಟ್ಟಬಹುದು ಇದರಿಂದಲೂ ಹುಳಗಳು ನಾಶವಾಗಿ ಹುಣ್ಣುಗಳು ಮಾಯುತ್ತವೆ.

೮. ಇದರ ಚಕ್ಕೆಯ ಕಷಾಯವನ್ನು ಮಾಡಿ ಕುಡಿಸುವುದರಿಂದ ಜ್ವರ, ದಮ್ಮು (ಗೂರಲು) ಇವೆರಡೂ ಶಾಂತವಾಗುವುವು ಮತ್ತು ಇಂದ್ರಿಯಗಳಲ್ಲಿ ಬಲವು ಹೆಚ್ಚುವುದು.

೯. ಪಕ್ವವಾಗಿರುವ ಹಣ್ಣಿನ ತಿರುಳನ್ನು ತೆಗೆದು ಕಟ್ಟುವುದರಿಂದ ಗಡ್ಡೆಗಳು ಮತ್ತು ಕುರುಗಳು ಬೇಗನೆ ಪಕ್ವವಾಗಿ ಒಡೆಯುತ್ತವೆ.

೧೦. ಸೀತಾಫಲದ ಬೀಜದೊಳಗಿನ ಪೊಪ್ಪುಗಳನ್ನು ಸಂಗ್ರಹಿಸಿ ಅರೆದು ಅದನ್ನು ಬಟ್ಟೆಯಲ್ಲಿ ಹಾಕಿ ಬತ್ತಿಯಂತೆ ಸುತ್ತಬೇಕು. ಆ ಬತ್ತಿಯ ಹೊಗೆಯನ್ನು ಮೂರ್ಛೆ (ಹಿಸ್ಟೀರಿಯಾ) ರೋಗದವರಿಗೆ ಮೂರ್ಛೆ ಬಂದಾಗ ಮೂಗಿಗೆ ಸೇರಿಸಬೇಕು. ಇದರಿಂದ ಕೆಲವು ದಿನಗಳಲ್ಲಿ ರೋಗದ ವೇಗವು ಕಡಿಮೆಯಾಗುತ್ತಾ ಹೋಗುತ್ತದೆ.

೧೧. ಸೀತಾಫಲದ ಎಲೆಗಳನ್ನು ತಂದು ಒಣಗಿಸಿ ಬಾಣಲೆಯಲ್ಲಿ ಹಾಕಿ ಹುರಿದು ಅನಂತರ ಕುಟ್ಟಿ ಚೂರ್ಣಿಸಿ ಸೀಸೆಯಲ್ಲಿ ಇಟ್ಟು ಕೊಳ್ಳಬೇಕು. ಈ ಚೂರ್ಣವು ಸಕಲ ವಿಧಗಳಾದ ಹುಣ್ಣುಗಳಿಗೆ ದಿವ್ಯೌಷಧವಾಗಿದೆ. ಏಟು ಬಿದ್ದು ಮುರಿದಿರುವ ಅಂಗವೂ ಕೂಡಿಕೊಳ್ಳುತ್ತದೆ. ಅಕಸ್ಮಾತ್ತಾಗಿ ದನಗಳು ಹಾಯುವುರಿಂದ ಕೊಂಬು ತಗಲಿ ಬಹಳ ಅಪಾಯಕರವಾದ ಗಾಯವಾಗಿದ್ದರೆ ಮತ್ತು ರಕ್ತವು ಹೆಚ್ಚಾಗಿ ಸೋರಿ ಮಾಂಸವು ಹೊರಬಿದ್ದಿದ್ದರೂ ಸಹ ಈ ಚೂರ್ಣವನ್ನು ಆಳವಾಗಿರುವ ಆ ಗಾಯದಲ್ಲಿ ತುಂಬಿ ಪಟ್ಟಿಯನ್ನು ಕಟ್ಟಿದರೆ ಬಹು ಬೇಗನೆ ಮಾಂಸವು ಕೂಡಿಕೊಂಡು ಗಾಯವು ಮಾಯುತ್ತದೆ. ಈ ಚೂರ್ಣವು ಎಲ್ಲ ತರಹದ ಗಾಯ ಮತ್ತು ಹುಣ್ಣುಗಳಿಗೆ ಅತ್ಯಂತ ಗುಣಕಾರಿಯಾಗಿದೆ ಹಳ್ಳಿಯ ಕಡೆ ಸೀತಾಫಲದ ಗಿಡಗಳು ಅತ್ಯಧಿಕವಾಗಿರುತ್ತವೆ. ಪಾಠಕರು ಇದರ ಉಪಯೋಗವನ್ನು ತಾವು ಹೊಂದುವುದಲ್ಲದೆ ಹಳ್ಳಿಯ ಜನಗಳಿಗೆ ಹೇಳಿ ಅವರೂ ಈ ಸುಲಭ ಸಾಧ್ಯವಾದ ಗಿಡದ ಪ್ರಯೋಜನವನ್ನು ಹೊಂದುವಂತೆ ದಯವಿಟ್ಟು ಮಾಡಬೇಕು. ಮೇಲೆ ಕಾಣಿಸಿರುವ ಸೀತಾಫಲದ ಹಣ್ಣು, ಎಲೆ, ಬೀಜಗಳ ಪ್ರಯೋಗಗಳೆಲ್ಲವೂ ಬಹಳ ಪ್ರಯೋಜನಕಾರಿಗಳಾಗಿವೆ. ಆದುದರಿಂದ ಇವುಗಳನ್ನು ಪಾಠಕರು ಪರೋಪಕಾರಕ್ಕೋಸುಗ ಪ್ರಚಾರ ಮಾಡಬೇಕು.

---

ಹುಣಸೆ ಹಣ್ಣು:—ಹೊಸದು ಬಹಳ ಹುಳಿಯಾಗಿರುತ್ತದೆ. ಭೇದಿಯನ್ನು ಮಾಡಿಸುವುದು, ವಾಯುವನ್ನು ಕಡಿಮೆಮಾಡುವುದು,

ಶ್ಲೇಷ್ಮವನ್ನುಂಟುಮಾಡುವುದು, ಕಣ್ಣಿನ ರೋಗಿಗಳಿಗೆ ಹಿತಕರವಲ್ಲ, ಮತ್ತು ಅಪಥ್ಯವೂ ಆಗಿರುತ್ತದೆ. ಹಳೆಯ ಹುಣಸೆಹಣ್ಣಿನಲ್ಲಿ ಹುಳಿ ಕಡಿಮೆಯಾಗಿರುತ್ತದೆ. ವಾತ, ಪಿತ್ತ, ಶ್ಲೇಷ್ಮರೋಗಗಳನ್ನು ಶಾಂತಗೊಳಿಸುವುದು, ಮತ್ತು ಹೃದಯಕ್ಕೆ ಬಲವನ್ನೀಯುವುದು, ಭೇದಿಯನ್ನು ಮಾಡಿಸುವುದು, ಮೇಹವನ್ನು ತಗ್ಗಿಸುವುದು ಆದರೆ ಹಳೆಯದಾಗಲಿ ಹೊಸದಾಗಲಿ ಹುಣಸೆಹಣ್ಣನ್ನು ಹೆಚ್ಚಾಗಿ ಸೇವಿಸುವುದರಿಂದ ರಕ್ತವು ಕೆಡುತ್ತದೆ.

೧. ಹುಣಸೆಹಣ್ಣು = ತೂಕ, ಪುದೀನಾ ೨೦ ಎಲೆ, ಮೆಣಸು ೩ ಕಾಳು, ಕರಿ ಉಪ್ಪು = ತೂಕ, ಏಲಕ್ಕಿ ಹುರಿದದ್ದು ೨ ಕಾಳು, ಇವುಗಳನ್ನೆಲ್ಲಾ ನೀರಿನೊಡನೆ ನುಣ್ಣಗೆ ಅರೆದು ಚಟ್ನಿಯಂತೆ ಮಾಡಿ ಕಾಲರಾದ ರೋಗಿಗೆ ತಿನ್ನಿಸಬೇಕು ಈ ಚಟ್ನಿಯು ಹೊಟ್ಟೆಗೆ ಸೇರಿದ ಕೂಡಲೇ ಹೊಟ್ಟೆಯ ನೋವು, ವಾಂತಿ ಮತ್ತು ಭೇದಿ, ಬಾಯಾರಿಕೆ, ಇವೆಲ್ಲವೂ ಬಹು ಬೇಗನೆ ಶಾಂತವಾಗುತ್ತವೆ. ಈ ಪ್ರಯೋಗವನ್ನು ನೂರಾರು ಜನಗಳಿಗೆ ಹೇಳಿರುತ್ತೇನೆ. ಎಲ್ಲರಿಗೂ ಗುಣವಾಗಿದೆ. ಕಾಲರಾ ರೋಗದ ಸಮಯದಲ್ಲಿ ಈ ಪ್ರಯೋಗವನ್ನು ಎಲ್ಲಾ ಕಡೆಯಲ್ಲಿಯೂ ಪ್ರಚಾರಮಾಡಿದರೆ ನೂರಾರು ಪ್ರಾಣಿಗಳು ಈಶ್ವರನ ಕೃಪೆಯಿಂದ ಅವಶ್ಯವಾಗಿ ರೋಗ ಮುಕ್ತರಾಗುತ್ತಾರೆ. ಇಂತಹ ಸುಲಭ ಯೋಗವನ್ನು ಪ್ರಚಾರ ಮಾಡಬೇಕಾದುದು ಸುಶಿಕ್ಷಿತರಾದ ನಾಗರಿಕರ ಮುಖ್ಯ ಕರ್ತವ್ಯವಾಗಿದೆ.

ಮೇಲೆ ಕಾಣಿಸಿರುವ ಪದಾರ್ಥಗಳ ಅಳತೆಯು ಒಂದು ಹೊತ್ತಿನದಾಗಿದೆ. ಅವಶ್ಯಕಬಿದ್ದರೆ ಇದೇ ಅಳತೆಯಿಂದ ಹೆಚ್ಚಾಗಿ ಮಾಡಿಕೊಂಡು ರೋಗದ ವೇಗವನ್ನು ಅನುಸರಿಸಿ ಕಾಲು ಕಾಲು ಗಂಟೆ ಅಥವಾ ಅರ್ಧ ಅರ್ಧ ಗಂಟೆಗೆ ಔಷಧವನ್ನು ಕೊಡಬಹುದು. ಕಾಲರಾ ತೋರಿದ ಕೂಡಲೇ ಈ ಪ್ರಯೋಗವನ್ನು ಮಾಡಲಾರಂಭಿಸಿದರೆ ಆಯುಷ್ಯದ ಶೇಷವಿದ್ದವರೆಲ್ಲರೂ ಬದುಕಿಕೊಳ್ಳುವುದರಲ್ಲಿ ಯಾವ ಸಂಶಯವೂ ಇಲ್ಲ. ಆಯುಷ್ಯಕ್ಕೆ ಔಷಧವನ್ನು ಕೊಡತಕ್ಕವನು ಪರಮಾತ್ಮನಲ್ಲದೆ ಮನುಷ್ಯನಿಂದೇನಾಗುವುದು ?

೨. ಅತ್ಯುಷ್ಣದಿಂದ ಕಣ್ಣುಗಳು ಊದಿಕೊಂಡು ಕೆಂಪಾಗಿ ನೀರು ಸುರಿಯುತ್ತಿದ್ದರೆ, ಹುಣಸೆಹಣ್ಣಿನ ಎರಡು ಗೆಣ್ಣುಗಳನ್ನು ಮತ್ತು ಎರಡು ಆಲೂಬುಖಾರಗಳನ್ನೂ ನೀರಿನಲ್ಲಿ ನೆನೆಸಿ, ಕಿವಿಚಿ ಶೋಧಿಸಿಕೊಂಡು ಸ್ವಲ್ಪ ಕಲ್ಲುಸಕ್ಕರೆಯನ್ನು ಹಾಕಿ ೭ ದಿನಗಳ ವರೆಗೆ ನಿತ್ಯದಲ್ಲಿ ಕುಡಿಯುವುದರಿಂದ ಕಣ್ಣುಗಳ ಬಾಧೆಯು ಶಾಂತ ವಾಗುತ್ತದೆ.

೩. ಉಷ್ಣದಿಂದ ತಲೆನೋವು ಬಂದರೆ ೨ ತೊಲ ಹುಣಸೆ ಹಣ್ಣನ್ನು ನೀರಿನಲ್ಲಿ ನೆನೆ ಹಾಕಿದ್ದು, ಕಿವಿಚಿ ಶೋಧಿಸಿಕೊಂಡು ಸಕ್ಕರೆಯನ್ನು ಹಾಕಿ ಕುಡಿಯಿರಿ ನೋವು ನಿಲ್ಲುತ್ತದೆ.

೪. ಹುಣಸೆಹಣ್ಣನ್ನು ಕಿವಿಚಿ ಶೋಧಿಸಿದ ನೀರಿನಲ್ಲಿ ಹಸಿ ಕೊಬರಿಯನ್ನು ಅರೆದು ಹಚ್ಚಿದರೆ ಗೇರಿನ ಸಂಪರ್ಕದಿಂದುಂಟಾದ ಉರಿ ಮತ್ತು ಉಷ್ಣತೆ ಕೂಡಲೇ ಶಾಂತವಾಗುತ್ತದೆ.

೫. ಹುಣಸೆಹಣ್ಣನ್ನು ನೆನೆಸಿ ಕಿವಿಚಿ ಶೋಧಿಸಿದ ನೀರು, ಸಾಸಿವೆಯನ್ನು ಅರೆದು ಕಲಿಸಿದ ನೀರು ಮತ್ತು ತುಪ್ಪ ಇವುಗಳನ್ನು ಕೂಡಿಸಿ ಕುಡಿಯುವುದರಿಂದ ಅಫೀಮಿನ ವಿಷವು ನಿವಾರಣೆಯಾಗುತ್ತದೆ. ಅಫೀಮನ್ನು ತಿಂದು ಬಹಳ ಹೊತ್ತಾಗಿ ಅದು ಹೊಟ್ಟೆಯಲ್ಲಿ ಜೀರ್ಣವಾಗಿಬಿಟ್ಟಿದ್ದರೆ ಭಯಪಡದೆ ಭಗವಂತನನ್ನು ಸ್ಮರಿಸಿ ೧೦ ತೊಲ ನೆಲ್ಲಿಮರದ ಎಲೆಗಳನ್ನು ತಂದು ಅರ್ಧ ಸೇರು ನೀರಿನಲ್ಲಿ ಅರೆದು ಶೋಧಿಸಿ ೧೦-೧೦ ನಿಮಿಷಗಳಿಗೊಂದೊಂದು ಸಲದಂತೆ ನಾಲ್ಕೈದು ಸಲ ಕುಡಿಸಿರಿ. ಇದರಿಂದ ಅಫೀಮಿನ ಸಕಲ ಉಪದ್ರವಗಳೂ ದೂರವಾಗುತ್ತವೆ.

೬. ಹುಣಸೆಹಣ್ಣು ೨|| ತೊಲ ತಂದು ೫ ತೊಲ ನೀರಿನಲ್ಲಿ ಕಿವಿಚಿ ಶೋಧಿಸಿಕೊಳ್ಳಿ, ಅದರಲ್ಲಿ । ತೊಲ ಸೈಂಧವ ಲವಣ, ||। ತೊಲ ಪುದೀನ, = ತೊಲ ಮೆಣಸು, ಇವುಗಳನ್ನು ಅರೆದು ಸೇರಿಸಿ ಕುಡಿದುಬಿಡಿ. ಇದರಿಂದ ಅರುಚಿಯು ಕೂಡಲೇ ಶಾಂತವಾಗಿ ಆಹಾರದಲ್ಲಿ ಅಭಿರುಚಿಯುಂಟಾಗುತ್ತದೆ.

೭. ಹುಣಸೆಯ ಕಾಯಿಗಳೊಡನೆ ಉಪ್ಪನ್ನು ಕೂಡಿಸಿ ಅರೆದು ಎಲುಬು ಮುರಿದಿರುವ ಸ್ಥಳಕ್ಕೆ ಲೇಪಿಸಿದರೆ ಏಟಿನಿಂದುಂಟಾಗಿರುವ ನೋವು ಮತ್ತು ಬಾವು ಕೂಡಲೇ ಕಡಿಮೆಯಾಗಿ ಎಲುಬು ಕೂಡಿಕೊಳ್ಳುತ್ತದೆ.

೮. ಹುಣಸೆಯ ಎಲೆಗಳನ್ನು ಅರೆದು ಕಟ್ಟುವುದರಿಂದ ಮುರಿದ ಎಲುಬು ಸರಿಯಾಗುತ್ತದೆ.

೯. ಹುಣಸೆಯ ಎಲೆಯ ರಸದಲ್ಲಿ ಬಿಳಿಯ ಮೆಣಸನ್ನು ನಾಲ್ಕು ದಿನಗಳ ವರೆಗೆ ಅರೆದು ಮಾತ್ರೆಗಳನ್ನು ಕಟ್ಟಿ ಇಟ್ಟುಕೊಳ್ಳಿ ಸಮಯವು ಒದಗಿದಾಗ ನೀರಿನಲ್ಲಿ ಒಂದೊಂದು ಮಾತ್ರೆಯನ್ನು ತೇಯ್ದು ಹಚ್ಚಿದರೆ ಕಣ್ಣಿನ ಮುಂದೆ ಕತ್ತಲು ಕವಿಯುವುದು ನಿಂತು ಹೋಗುತ್ತದೆ.

೧೦. ಹುಣಸೆಯ ಎಲೆಯ ರಸವನ್ನು ಕುಡಿದರೆ ಗೇರು ತಗಲುವುದರಿಂದುಂಟಾದ ನವೆ ಮತ್ತು ಊತವು ನಿವಾರಣೆಯಾಗುತ್ತದೆ.

೧೧. ಎರಡು ತೊಲ ಹುಣಸೆಯ ಎಲೆಯನ್ನು ಒಂದೂವರೆ ಪಾವು ನೀರಿನಲ್ಲಿ ಹಾಕಿ ಕುದಿಸಿ ಒಂದು ಚಟಾಕಿಗೆ ಕಷಾಯವನ್ನು ಇಳಿಸಿಕೊಂಡು ಕಿವಿಚಿ ಶೋಧಿಸಿಕೊಳ್ಳಿ, ಅದರಲ್ಲಿ ಎರಡು ಗುರುಗಂಜಿಗಳಷ್ಟು ಹುರಿದಿರುವ ಹಿಂಗನ್ನು ಮತ್ತು ಕಾಲುತೊಲ ಸೈಂಧವ ಲವಣವನ್ನೂ ಪುಡಿಮಾಡಿ ಹಾಕಿ ಕುಡಿದು ಬಿಡಿ. ಇದರಿಂದ ಎಲ್ಲಾ ತರಹದ ಕೆಮ್ಮಲುಗಳೂ ಮಾಯವಾಗುತ್ತವೆ.

ಅನೇಕ ಸಲ ಪರೀಕ್ಷಿಸಲ್ಪಟ್ಟಿದೆ.

೧೨. ಹುಣಸೆಯ ಎಲೆ, ಮಣಶಿಲೆ, ಸೈಂಧವಲವಣ, ಹಿಂಗು, ಶುಂಠಿ, ಮುತ್ತುಗದ ಬೀಜ ಇವುಗಳನ್ನು ಸಮವಾಗಿ ಕುಟ್ಟಿ ಹಸುವಿನ ಸಗಣಿಯ ರಸವನ್ನು ಹಾಕಿ ಆರು ಗಂಟೆಗಳ ಕಾಲದ ವರೆಗೆ ಅರೆದು ಗುಳಿಗೆಗಳನ್ನು ಮಾಡಿಟ್ಟುಕೊಳ್ಳಬೇಕು ಇದನ್ನು ನೀರಿನಲ್ಲಿ ತೇಯ್ದು ಕಣ್ಣುಗಳಿಗೆ ಹಚ್ಚುವುದರಿಂದ ಚೇಳಿನ ವಿಷವು ಕೂಡಲೇ ಇಳಿಯುತ್ತದೆ. ಇದನ್ನು ಕಲ್ಕತ್ತೆಯ ನನ್ನ ಬಂಗಾಲಿ ಮಿತ್ರರೊಬ್ಬರು ಪರೀಕ್ಷಿಸಿ ಹೇಳಿರುತ್ತಾರೆ.

೧೩. ಹುಣಸೆಯ ೧೦ ತೊಲ ಎಲೆಯನ್ನು ಕಂಚಿನ ತಟ್ಟೆಯಲ್ಲಿ ಹಾಕಿ, ಬೇವಿನ ಮರದ ಗುಂಡಾದ ಕಟ್ಟಿಗೆಯ ತುದಿಗೆ ಹಳೆಯ ತಾಮ್ರದ ಮೂರುಕಾಸಿನ ಬಿಲ್ಲೆಯನ್ನು ಅಂಟಿಸಿ, ಆ ಕಟ್ಟಿಗೆಯಿಂದ ಎಲೆಯನ್ನು ತಿಕ್ಕಬೇಕು. ಎಲೆಯು ಚಟ್ಟಣಿಯಂತಾದ ಮೇಲೆ ಅದನ್ನು ಪುತ್ರವತಿಯಾದ ಸ್ತ್ರೀಯಳ ಎದೆಹಾಲಿನಲ್ಲಿ ಹತ್ತು ದಿನಗಳ ವರೆಗೆ ಬೆಳಗಿನಿಂದ ಸಾಯಂಕಾಲದ ವರೆಗೂ ಅದೇ ಕಟ್ಟಿಗೆಯಿಂದ ಅರೆಯುತ್ತಿರಬೇಕು. ಅನಂತರ ಅದನ್ನು ತೆಗೆದು ಸೀಸೆಯಲ್ಲಿಟ್ಟುಕೊಳ್ಳಬೇಕು. ಇದನ್ನು ಹಚ್ಚುವುದರಿಂದ ಕಣ್ಣಿನೊಳಗೆ ಬೆಳೆದಿರುವ ಮುತ್ತಿನಾಕಾರವಾಗಿರುವ ಬಿಳಿಯ ಬಿಂದುವು ಕರಗಿಹೋಗಿ ಕಣ್ಣು ಸ್ವಚ್ಛವಾಗುತ್ತದೆ. ಈ ರೋಗಕ್ಕೆ ಇದು ಅದ್ಭುತ ಗುಣಕಾರಿಯಾದ ಔಷಧವಾಗಿದೆ.

೧೪. ಹುಣಸೆಯ ಬೀಜವನ್ನು ನಿಂಬೆಹಣ್ಣಿನ ರಸದಲ್ಲಿ ಅರೆದು ಹಚ್ಚುವುದರಿಂದ ಹುಳಕಡ್ಡಿ ಮತ್ತು ಗಜಕರ್ಣವು ನಾಶವಾಗುತ್ತದೆ.

೧೫. ಹಳೆಯ ಹುಣಸೆಯ ಬೀಜ, ಸೈಂಧವಲವಣ, ಹಿಪ್ಪಲಿ, ಪಚ್ಚಕರ್ಪೂರ ಇವುಗಳನ್ನು ಸಮಭಾಗದಿಂದ ಸಂಗ್ರಹಿಸಿ ಕುಟ್ಟಿ ಚೂರ್ಣಿಸಿರಿ, ಅನಂತರ ಶುದ್ಧವಾದ ಪನ್ನೀರಿನಲ್ಲಿ ಅರೆಯಿರಿ, ಕಣ್ಣುಗಳಿಗೆ ಈ ಅಂಜನವನ್ನು ನಿತ್ಯದಲ್ಲಿ ಹಚ್ಚುತ್ತಿದ್ದರೆ ದೃಷ್ಟಿಮಾಂದ್ಯ, ಕತ್ತಲು ಕವಿದಂತಾಗುವುದು, ಕಣ್ಣಿನ ಮುಂದೆ ಪರದೆ ಕಟ್ಟಿದಂತಾಗುವುದು, ಮುಂತಾದ ತೊಂದರೆಗಳು ಖಂಡಿತವಾಗಿ ದೂರವಾಗುತ್ತವೆ. ಪರೀಕ್ಷಿಸಲ್ಪಟ್ಟಿದೆ.

೧೬. ಎಂಭತ್ತು ತೊಲ ಹುಣಸೆಯ ಬೀಜಗಳನ್ನುತಂದು ನೀರಿನಲ್ಲಿನಾಲ್ಕು ದಿನಗಳ ವರೆಗೆ ನೆನೆಹಾಕಬೇಕು, ಅನಂತರ ಅವುಗಳನ್ನು ಹೊರಗೆ ತೆಗೆದು ಮೇಲಿನ ಸಿಪ್ಪೆಯನ್ನು ತೆಗೆದು ಹಾಕಿ, ಹಸಿಯಾಗಿರುವಾಗಲೇ ಒರಳಿನಲ್ಲಿ ಹಾಕಿ ನುಣ್ಣಗೆ ಕುಟ್ಟಿ, ಆ ಮೇಲೆ ಬಿಸಿಲಿನಲ್ಲಿ ಹಾಕಿ ಒಣಗಿಸಬೇಕು; ಒಣಗಿದ ನಂತರ ಬೀಸುವ ಕಲ್ಲಿಗೆ ಹಾಕಿ ಬೀಸಿ ಶೋಧಿಸಿಕೊಳ್ಳಬೇಕು ಅನಂತರ ಸಮಭಾಗದ ಸಕ್ಕರೆಯನ್ನು ಕೂಡಿಸಿ ಇಟ್ಟುಕೊಳ್ಳಬೇಕು. ಪ್ರತಿದಿನದ ಪ್ರಾತಃಕಾಲದಲ್ಲಿ ಕಾಲು ತೊಲದಿಂದ ಅರ್ಧ ತೊಲದವರೆಗೆ ಸೇವಿಸಿದರೆ ೪೦ ದಿನಗಳೊಳಗೆ ವೀರ್ಯವು ಬಹಳ ಗಟ್ಟಿಯಾಗುತ್ತದೆ. ಶೀಘ್ರಪತನದ

ರೋಗವುಳ್ಳವರು ಇದನ್ನು ಅವಶ್ಯಕವಾಗಿ ಸೇವಿಸಬೇಕು. ಸಾಮಾನ್ಯ ವಾಗಿ ಈ ಸುಲಭ ಚೂರ್ಣವು ಎಲ್ಲರಿಗೂ ಉಪಕಾರವನ್ನುಂಟು ಮಾಡುತ್ತದೆ. ಹುಣಸೆಯ ಬೀಜದಿಂದ ಏನಾಗುತ್ತದೆಂದು ಉದಾಸೀನ ಮಾಡದೆ ದಯವಿಟ್ಟು ಇದನ್ನು ಸೇವಿಸಿ ನೋಡಿ ! ನಮ್ಮ ಸಣ್ಣ ಸಣ್ಣ ವಸ್ತುಗಳಲ್ಲಿ ಎಂತೆಂತಹ ಮಹತ್ತ್ವವು ಅಡಕವಾಗಿದೆಯೆಂಬುದು ಆಗ ನಿಮಗೆ ಗೊತ್ತಾಗುತ್ತದೆ. ಪರೀಕ್ಷಿಸದೆ ಆಲಸ್ಯದಿಂದ ನಮ್ಮ ದೇಶದ ಗುಣಕರ ವಸ್ತುಗಳನ್ನು ಹೀಯಾಳಿಸುವುದು ಉಚಿತವಲ್ಲ ವೆಂಬುದು ನಮ್ಮ ಪ್ರಿಯ ಪಾಠಕರಿಗೆ ಗೊತ್ತಿಲ್ಲದೆ ಇಲ್ಲ. ಇದನ್ನು ಶ್ರೀಮಂತರು ಬಿಟ್ಟರೂ ನಮ್ಮ ಹಳ್ಳಿಯ ಬಂಧುಗಳು ಕಸಕ್ಕೆ ಹಾಕುವ ಹುಣಸೆಯ ಬೀಜಗಳಿಂದ ವಿಶೇಷ ಪ್ರಯೋಜನವನ್ನು ಹೊಂದುವರೆಂಬ ನಂಬಿಕೆಯು ಇರುತ್ತದೆ.

೧೭ ಹುಣಸೆಯ ಮರದ ಒಳ ಚಕ್ಕೆಯನ್ನು ತಂದು ಅರೆದು ಮಜ್ಜಿಗೆಯೊಡನೆ ಒಂದು ದಿನದಲ್ಲಿ ೨-೩ ಸಲ ಕುಡಿಯುವುರಿಂದ ಅತಿ ಸಾರವು ನಿಲ್ಲುತ್ತದೆ.

೧೭. ಹುಣಸೆಯ ಮರದ ಕಟ್ಟಿಗೆಯನ್ನು ಸುಟ್ಟು ಇದ್ದಲಾಗಿ ಮಾಡಿ, ಅದನ್ನು ನುಣ್ಣಗೆ ಅರೆದು ಬಟ್ಟೆಯಿಂದ ಶೋಧಿ ಸಿಟ್ಟುಕೊಳ್ಳಬೇಕು. ಅಕಸ್ಮಾತ್ತಾಗಿ ಬೆಂಕಿಯ ಅಪಾಯದಿಂದ ಸುಟ್ಟು ಗಾಯವಾದರೆ, ಆ ಕೂಡಲೇ ಈ ಪುಡಿಯನ್ನು ಕೊಬರಿಯ ಎಣ್ಣೆಯಲ್ಲಿ ಕಲಿಸಿ ಹಚ್ಚಬೇಕು. ಇದರಿಂದ ಎಂತಹ ಸುಟ್ಟಗಾಯ ವಾದರೂ ಮಾಯವಾಗುತ್ತದೆ.

೧೯. ಹುಣಸೆಯ ಒಳತೊಗಟೆಯನ್ನು ಅರೆದು ತುಪ್ಪದಲ್ಲಿ ಕೂಡಿಸಿ ಕೂಡಲೇ ಲೇಪಿಸುವುದರಿಂದ ಸುಟ್ಟಗಾಯವು ಮಾಯುತ್ತದೆ.

---

ಪರಂಗಿಹಣ್ಣು;—ಇದನ್ನು ಉತ್ತರ ಕರ್ನಾಟಕದ ಜನಗಳು "ದೊಡ್ಡಹಿಡಲ ಹಣ್ಣು" ಎಂತಲೂ ಕರೆಯುವುದು ವಾಡಿಕೆಯಾಗಿದೆ. ಈ ಹಣ್ಣು ಮೂಲವ್ಯಾಧಿಯ ರಕ್ತಸ್ರಾವವನ್ನು ಮತ್ತು ಇತರ ಕಾರಣ ಗಳಿಂದ ಮೂಗು ಬಾಯಿ ಆಸನ ಮುಂತಾದ ಮಾರ್ಗಗಳ ಮೂಲಕ

ಬೀಳುತ್ತಿರುವ ರಕ್ತವನ್ನೂ ತಡೆಯುತ್ತದೆ. ಮೂತ್ರಾಂಗದ ಹುಣ್ಣು ಮತ್ತಿತರ ಹುಣ್ಣುಗಳಿಗೂ ಲಾಭಕಾರಿಯಾಗಿದೆ. ಮತ್ತು ಅಗ್ನಿಮಾಂದ್ಯವನ್ನು (Dyspepsia) ಹೋಗಲಾಡಿಸುವುದು. ಪ್ರತಿ ದಿನದ ಪ್ರಾತಃಕಾಲದಲ್ಲಿಯೇ ಕೆಲವು ದಿನಗಳ ವರೆಗೆ ಈ ಹಣ್ಣನ್ನು ತಿನ್ನುತ್ತಿದ್ದರೆ ಬಹು ದಿನಗಳ ಮಲಬದ್ಧತೆಯು ನಾಶವಾಗುತ್ತದೆ. ಬಹಳ ದಿನಗಳಿಂದಲೂ ನೀರಿನಂತಹ ಭೇದಿಯಾಗುತ್ತಿರುವವರಿಗೆ ಈ ಹಣ್ಣು ಲಾಭದಾಯಕವಾಗಿದೆ.

ಪರಂಗಿಗಿಡದ ಹೂವುಗಳನ್ನು ಕೈಯಿಂದ ಒಸಗಿ, ಕಟ್ಟಿರುವೆ ಮತ್ತು ಇತರ ಹುಳಗಳು ಕಡಿದಿರುವ ಸ್ಥಳಕ್ಕೆ ಹಚ್ಚುವುದರಿಂದ ಶಾಂತಿಯುಂಟಾಗುತ್ತದೆ. ಇದರ ಹಾಲನ್ನು ೪-೫ ದಿನಗಳ ವರೆಗೆ ಹಚ್ಚುವುದರಿಂದ ನವೆ, ಗಜ್ಜಿ, ಹುಳಕಡ್ಡಿಗಳು ಗುಣವಾಗುವುವು ಮತ್ತು ಹೊಟ್ಟೆಗೆ ಕೊಡುವುದರಿಂದ ಪ್ಲೀಹ (Spleen) ಮತ್ತು ಯಕೃತ್ತಿನ (Liver) ಬೆಳವಣಿಗೆಯು ಬಹಳ ಮಟ್ಟಿಗೆ ತಗ್ಗುತ್ತದೆ. ಇಂತಹ ಸಂದರ್ಭದಲ್ಲಿ ೬೦ ಹನಿಗಳಷ್ಟು ಹಾಲಿಗೆ ಸಮಭಾಗದ ಸಕ್ಕರೆಯನ್ನು ಕೂಡಿಸಿ ಅದನ್ನು ಒಂದು ದಿನಕ್ಕೆ ೩ ಸಲ ಕೊಡಬಹುದು. ಇದರಿಂದ ಪ್ಲೀಹ ಯಕೃತ್ತುಗಳ ವಿಕಾರವು ದೂರವಾಗುವುದು ಮತ್ತು ಜಠರಾಗ್ನಿಯು ಬಲಗೊಳ್ಳುವುದು. ಹಸಿಯ ಕಾಯಿಯನ್ನು ತಂದು ನಿಲುವಾಗಿ ನಿಲ್ಲಿಸಿ ಗೀರಿದರೆ ಹಾಲು ಹೊರಡುತ್ತದೆ. ಆ ಹಾಲನ್ನು ಸಂಗ್ರಹಿಸಿ ಕಲಾಯದ ಒಂದು ಸಣ್ಣ ಬಟ್ಟಲಿನಲ್ಲಿ ಹಾಕಿ ಬೆಂಕಿಯ ಮೇಲಿಟ್ಟರೆ ಬಿಳಿಯ ಚೂರ್ಣವಾಗುತ್ತದೆ. ಆ ಬಟ್ಟಲನ್ನು ತೆಗೆದನಂತರ ಚೂರ್ಣವನ್ನು ೨೪ ಗಂಟೆಗಳ ವರೆಗೆ ಅದರಲ್ಲಿಯೇ ಬಿಟ್ಟಿರಬೇಕು. ಅನಂತರ ಚೂರ್ಣವನ್ನು ತೆಗೆದುಕೊಂಡು ಸೀಸೆಯಲ್ಲಿಟ್ಟುಕೊಳ್ಳಬೇಕು. ಈ ಚೂರ್ಣವನ್ನು ದೊಡ್ಡವರಿಗೆ ೧ ಸಲಕ್ಕೆ ೨ ಗೋಧಿಗಳಷ್ಟನ್ನು ಸಕ್ಕರೆಯೊಡನೆ ಅಥವಾ ಹಾಲಿನೊಡನೆ ಊಟವಾದ ನಂತರ ಕೊಡಬೇಕು. ಈ ರೀತಿಯಾಗಿ ಸೇವಿಸುವುದರಿಂದ ಪ್ಲೀಹ ಯಕೃತ್ತುಗಳ ದೋಷವು ದೂರವಾಗಿ ಅಗ್ನಿಯು ವೃದ್ಧಿಯಾಗುತ್ತದೆ. ಬೇಕಾದಾಗ ಹಸಿಯ ಕಾಯಿಯಿಂದ ಹಾಲನ್ನು ಗಾಜಿನ ಬಟ್ಟಲಿನಲ್ಲಿ ಸಂಗ್ರಹಿಸಿ, ಆ ಕೂಡಲೇ ಉಪಯೋಗಿಸಬೇಕು. ಇಲ್ಲವಾದರೆ ಹಾಲು ಕೆಟ್ಟು ಹೋಗುತ್ತದೆ. ಈ ಹಾಲನ್ನು ೧ ಸಲಕ್ಕೆ

೧೦-೧೦ ತೊಟ್ಟುಗಳಂತೆ ಸ್ವಲ್ಪ ನೀರಿನಲ್ಲಿ ಕೂಡಿಸಿ ದಿನಕ್ಕೆ ೩ ಸಲ ಕುಡಿಯಬಹುದು. ಈ ಹಾಲಿನಿಂದ ಒಂದೆರಡು ಭೇದಿಗಳೂ ಆಗುವ ಸಂಭವವುಂಟು. ಇದರಲ್ಲಿ ಸ್ತ್ರೀಯರ ರಜಸ್ಸನ್ನು ಹೊರ ಪಡಿಸತಕ್ಕ ಗುಣವಿರುವುದರಿಂದ ಗರ್ಭಿಣಿಯರಿಗೆ ಈ ಹಾಲನ್ನು ಕೊಡಕೂಡದು. ಇದರಿಂದ ಗರ್ಭಸ್ರಾವವು ಆಗತಕ್ಕ ಭಯವಿರುತ್ತದೆ. ಈ ಹಾಲನ್ನು ಹಚ್ಚಿದರೆ ಚೇಳಿನ ವಿಷವು ಇಳಿಯುತ್ತದೆ.

ಹಸಿಯ ಕಾಯಿಯನ್ನು ಸ್ತ್ರೀಯರು ತಿನ್ನುವುದರಿಂದ ಹಾಲು ಹೆಚ್ಚುವುದು. ದೋರಗಾಯಿಯನ್ನು ಗುಂಡಗೆ ಕತ್ತರಿಸಿ ಒಣಗಿಸಿ ಕುಟ್ಟಿ ಇಟ್ಟುಕೊಳ್ಳಬೇಕು. ಈ ಚೂರ್ಣವನ್ನು ೫ ರಿಂದ ೨೦ ಗುಂಜಿಗಳ ವರೆಗೆ ಬಿಸಿನೀರಿನೊಡನೆ ಸೇವಿಸುವುದರಿಂದ ಅಗ್ನಿಮಾಂದ್ಯವು ನಿವಾರಣೆಯಾಗುತ್ತದೆ. ಹಸಿಯ ಕಾಯಿಯನ್ನು ತರಕಾರಿಯ ರೂಪವಾಗಿ ಉಪಯೋಗಿಸುವುದು, ಹೊಟ್ಟೆಯಲ್ಲಿ ಗಡ್ಡೆಯಿರುವವರಿಗೆ ಹಿತಕರವಾಗಿರುತ್ತದೆ. ಪರಂಗಿಹಣ್ಣಿನ ಒಂದು ಚೂರಿನಲ್ಲಿ ನವಾಸಾಗರದ ಪುಡಿಯನ್ನು ೨ ರಿಂದ ೪ ಗುಂಜಿಗಳ ವರೆಗೆ ಹಾಕಿ ಪ್ರತಿ ದಿನದ ಪ್ರಾತಃಕಾಲದಲ್ಲಿಯೇ ತಿನ್ನುವುದರಿಂದ ಕೆಲವು ದಿನಗಳಲ್ಲಿ ಹೊಟ್ಟೆಯಲ್ಲಿನ ಭಯಂಕರ ಗಡ್ಡೆಯೂ ಕರಗಿ ಹೋಗುತ್ತದೆ. ಇದು ಪ್ಲೀಹದ ಬೆಳವಣಿಗೆಗೆ ಅತ್ಯುತ್ತಮ ಚಿಕಿತ್ಸೆಯಾಗಿದೆ.

ಪರಂಗಿಯ ಎಲೆಯನ್ನು ಅರೆದು ಕಟ್ಟುವುದರಿಂದ ಅಥವಾ ಲೇಪಿಸುವುದರಿಂದ ನರಗಳ ನೋವು ನಿಲ್ಲುತ್ತದೆ ಮತ್ತು ಆನೆಯ ಕಾಲಿನಂತೆ ದಪ್ಪವಾಗಿರುವ ಕಾಲಿನ ಬಾವು, ನೋವುಗಳು ಇಳಿಯುತ್ತವೆ. ಬಾವು, ಅಥವಾ ನೋವಿರುವ ಸ್ಥಳಕ್ಕೆ ಎಲೆಯನ್ನು ಬೆಂಕಿಯಲ್ಲಿ ಸೇಕಿಸಿ ಕಟ್ಟಲೂಬಹುದು.

---

ಖರಬೂಜ ಹಣ್ಣು:—ಸಮಾನವಾದ ಶೀತೋಷ್ಣ ಗುಣವುಳ್ಳುದು, ಮೋಹ ಶಾಂತಿಯನ್ನು ಮಾಡಿ ಶರೀರದ ಬಲವನ್ನು ಹೆಚ್ಚಿಸುವುದು, ರಕ್ತವನ್ನು ಶೋಧಿಸುವುದು, ಬೇಗನೆ ಜೀರ್ಣವಾಗತಕ್ಕುದು, ಶರೀರಕ್ಕೆ ಸೇರಿರುವ ಕಲ್ಮಷವನ್ನು ಹೋಗಲಾಡಿಸುವುದು, ಮೂತ್ರ ಕೋಶದಲ್ಲಿನ ಹರಳನ್ನು ಕರಗಿಸುವುದು, ಮೂತ್ರವನ್ನು ಸಡಿಲಿಸುವುದು, ಮತ್ತು ಸ್ತ್ರೀಯರ ಹಾಲನ್ನು ವೃದ್ಧಿಪಡಿಸುವುದು.

ಇದರ ಬೀಜಗಳು—ಮೇಹ ಶಾಂತಿಯನ್ನು ಮಾಡಿ ವೀರ್ಯ ವನ್ನು ಪುಷ್ಟಿಗೊಳಿಸುವುವು ಮತ್ತು ವೃದ್ಧಿಗೊಳಿಸುವುವು, ಮೂತ್ರದ ತಡೆಯನ್ನು ಸರಿಪಡಿಸುವುವು. ಈ ಬೀಜಗಳ ಚೂರ್ಣ ಅಥವಾ ಕಷಾಯವನ್ನು ಕೆಲವು ದಿನಗಳ ವರೆಗೆ ಸೇವಿಸುವುದರಿಂದ ಹಳೆಯ ಗಜಕರ್ಣ (ಎಗ್ಜಿಮಾ) ವು ಗುಣವಾಗುವುದು. ಈ ರೋಗವು ಹಳೆಯ ದಾದಮೇಲೆ ಚರ್ಮವನ್ನು ಬೇಗನೆ ಬಿಟ್ಟು ಹೋಗಲು ಇಷ್ಟಪಡುವು ದಿಲ್ಲ. ಕೆಲವು ವೇಳೆ ರಸಿಗೆಯಾಡುತ್ತ, ಮತ್ತೆ ಕೆಲವು ವೇಳೆ ಕೇವಲ ನವೆಯಾಗುತ್ತ ಬಹಳ ತೊಂದರೆಯನ್ನುಂಟುಮಾಡುತ್ತಿರುವ ಈ ರೋಗವುಳ್ಳವರು ಖರಬೂಜದ ಸುಗ್ಗಿಯ ಕಾಲದಲ್ಲಿ ಪ್ರತಿದಿನ ತಪ್ಪದೆ ಸಾಧ್ಯವಾದಷ್ಟು ಹಣ್ಣನ್ನು ತಿನ್ನುವುದು ವಿಶೇಷ ಲಾಭಕರ ವಾಗಿರುತ್ತದೆ. ಇದರ ಅಭಾವದ ಕಾಲದಲ್ಲಿ ಉಪಯೋಗಿಸುವುದ ಕ್ಕೋಸುಗ ಇದರ ಬೀಜಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳುವುದು ತ್ತಮ. ಹಣ್ಣನ್ನು ತಿಂದ ಮೇಲೆ ಬೀಜವನ್ನು ಯಾರೂ ಬಿಸಾಡಬಾರದು. ಇದರಂತೆ ಸೌತೆಯ ಬೀಜವನ್ನೂ ಸಂಗ್ರಹಿಸಿ ಇಟ್ಟು ಕೊಳ್ಳುವುದು ಪ್ರಯೋಜನಕರವಾಗಿರುತ್ತದೆ. ಈ ಎರಡು ವಿಧ ಬೀಜ ಗಳಲ್ಲಿಯೂ ಮೂತ್ರವನ್ನು ಶೋಧಿಸತಕ್ಕ ಮತ್ತು ವೀರ್ಯವನ್ನು ಶೋಧಿಸಿ ಅದರ ವೃದ್ಧಿಯನ್ನು ಮಾಡತಕ್ಕ ಗುಣವು ಹೆಚ್ಚಾಗಿರು ತ್ತದೆ. ಈ ಬೀಜಗಳು ಸಮಯಕ್ಕೆ ನೂರಾರು ರೂಪಾಯಿಗಳ ಬೆಲೆಯ ಔಷಧಿಗಳಿಗಿಂತಲೂ ಹೆಚ್ಚು ಉಪಕಾರವನ್ನು ಮಾಡುತ್ತವೆ. ಹಣ್ಣನ್ನು ತಿಂದವರು ಮರೆಯದೆ ಬೀಜಗಳನ್ನು ತೆಗೆದು ಒಣಗಿಸಿ ಇಟ್ಟುಕೊಳ್ಳ ಬೇಕು. ಊಟವಾದ ನಂತರ ಈ ಹಣ್ಣನ್ನು ತಿನ್ನುವುದರಿಂದ ಆಹಾರದ ಪಚನೆಯು ಆಯಾಸವಿಲ್ಲದೆ ಆಗುತ್ತದೆ. ಅಥವಾ ಆಹಾರವು ಅರುಗುತ್ತಿರುವ ಸಮಯದಲ್ಲಿಯಾದರೂ ತಿನ್ನಬಹುದು, ಆದರೆ ಅತಿ ಯಾಗಿ ತಿಂದರೆ ಕಫವು ಹೆಚ್ಚಾಗುವುದಲ್ಲದೆ ಭೇದಿಯಾಗತಕ್ಕ ಸಂಭ ವವೂ ಉಂಟು. ಹುಳಿಯಾಗಿರುವ ಹಣ್ಣನ್ನು ತಿನ್ನುವುದರಿಂದ ಮೂತ್ರ ದಲ್ಲಿ ಉರಿಯುಂಟಾಗುತ್ತದೆ. ಇದೇಜಾತಿಯಲ್ಲಿ ಬೆಳೆಯುವುದೊಂದು ತರಹದ ಹಣ್ಣು ಇದೆ ಅದನ್ನು ಸೌತೆಹಣ್ಣು; ಅಥವಾ ಕೆಕ್ಕರಿಕೆಹಣ್ಣು ಎಂದು ಕರೆಯುವ ವಾಡಿಕೆಯಾಗಿದೆ. ಗುಣದಲ್ಲಿ ಸಾಮಾನ್ಯವಾಗಿ ಖರ ಬೂಜ ಹಣ್ಣಿನಂತೆಯೇ ಇರುತ್ತದೆ. ಇದರ ಬೀಜಗಳೂ ಖರಬೂಜದ

ಬೀಜಗಳಂತೆಯೇ ಪ್ರಯೋಜನಕಾರಿಗಳಾಗಿರುತ್ತವೆ. ಇದರ ಸಿಪ್ಪೆಯು ಬಹಳ ತೆಳುವಾಗಿರುತ್ತದೆ ಇದು ಖರಬೂಜದಷ್ಟು ರುಚಿಕರವಾದುದಲ್ಲ. ಇದನ್ನು ಪಾನಕಕ್ಕೆ ವಿಶೇಷವಾಗಿ ಉಪಯೋಗಿಸುತ್ತಾರೆ ಮತ್ತು ಇದರ ತಿರುಳನ್ನು ತೆಗೆದು ಸಕ್ಕರೆಯನ್ನು ಹಾಕಿ ಮಾವಿನ ಹಣ್ಣಿನ ಸೀಕರಣೆಯಂತೆ ಮಾಡಿ ರೊಟ್ಟಿಯ ಸಂಗಡ ಉಪಯೋಗಿಸುವುದು ಕೆಲವೆಡೆಗಳಲ್ಲಿ ವಾಡಿಕೆಯಾಗಿರುತ್ತದೆ.

---

**ಕಲ್ಲಂಗಡಿಹಣ್ಣು** :—ಈ ಹಣ್ಣಿನಲ್ಲಿ ನೀರಿನ ಭಾಗವು ಅತ್ಯಧಿಕವಾಗಿರುತ್ತದೆ. ಇದನ್ನು ತಿನ್ನುವುದರಿಂದ ನೀರ್ಗಾಯಾಸದ ಬಳಲಿಕೆಯು ಶಾಂತವಾಗುವುದು. ಬಾಯಾರಿಕೆಯ ಸಮಯದಲ್ಲಿ ಈ ಹಣ್ಣು ಬಹಳ ಹಿತಕರವಾಗಿದೆ. ಇದರಿಂದ ಪಿತ್ತ ವಿಕಾರವು ಶಾಂತವಾಗುವುದಲ್ಲದೆ ಮೂತ್ರವಿಕಾರ ಮತ್ತು ರಕ್ತವಿಕಾರವೂ ಶಾಂತವಾಗಿ ಶುದ್ಧ ರಕ್ತವು ಹೆಚ್ಚಿ ಶರೀರದ ಬಣ್ಣವು ಸ್ವಚ್ಛವಾಗುತ್ತದೆ. ಈ ಹಣ್ಣು ಉಷ್ಣಪ್ರಕೃತಿಯವರಿಗೆ ವಿಶೇಷ ಲಾಭಕರವಾಗಿದೆ. ಮೇಹ ವ್ಯಾಧಿಗೆ ಬಹಳ ಹಿತಕರವಾಗಿರುವುದಲ್ಲದೆ ಮೂತ್ರಾಶಯದ ಹರಳನ್ನು ಕರಗಿಸುತಕ್ಕುದಾಗಿದೆ. ಇದರ ಬೀಜಗಳು ಮೇಹ ಶಾಂತಿಯನ್ನುಂಟುಮಾಡಿ ಮೂತ್ರದೋಷವನ್ನು ಹೋಗಲಾಡಿಸುತ್ತವೆ.

ಈ ಹಣ್ಣಿನ ಅರ್ಧ ಸೇರು ರಸದಲ್ಲಿ ಒಂದು ತೊಲ ಜೀರಿಗೆಯನ್ನು ಅರೆದು ಸ್ವಲ್ಪ ಸಕ್ಕರೆಯನ್ನು ಕೂಡಿಸಿ ಕುಡಿಯುವುದರಿಂದ ತಡೆದಿದ್ದ ಮೂತ್ರವು ಹೊರಬೀಳುತ್ತದೆ ಮತ್ತು ಉರಿಯು ಶಾಂತವಾಗುತ್ತದೆ.

ಈ ಹಣ್ಣನ್ನು ತಂದು ಉಂಡಿಗೆಯನ್ನು ಹಾಕಿ ಆ ರಂಧ್ರದಲ್ಲಿ ಅರ್ಧ ಸೇರು ಉತ್ತಮವಾದ ಅಕ್ಕಿಯನ್ನೂ ಮತ್ತು ಒಂದು ಪಾವು ಬಟಾಣಿಯ ಕಾಳನ್ನೂ ತುಂಬಿ, ಆ ಕೊಯ್ದಿರುವ ಚೂರಿನಿಂದಲೇ ಯಥಾರೀತಿಯಾಗಿ ರಂಧ್ರವನ್ನು ಮುಚ್ಚಿ, ಒಂದು ವಾರದ ವರೆಗೆ ಹಾಗೆಯೇ ಇಟ್ಟಿರಬೇಕು. ಒಂಡು ವಾರ ಕಳೆದ ಮೇಲೆ ಹಣ್ಣಿನೊಳಗಿನ ಅಕ್ಕಿ ಮತ್ತು ಬಟಾಣಿಗಳನ್ನು ತೆಗೆದುಕೊಂಡು ನೆರಳಿನಲ್ಲಿ ಒಣಗಿಸಿ ಪುಡಿಮಾಡಿ ಶೋಧಿಸಿಕೊಂಡು ಸೀಸೆಯಲ್ಲಿಟ್ಟುಕೊಳ್ಳ

ಬೇಕು. ಇದಕ್ಕೆ ಮೂರು ತೊಲ ಕಚೋರ ಮತ್ತು ಕಾಲುತೊಲ ಕರ್ಪೂರ ಇವೆರಡನ್ನು ನುಣ್ಣಗೆ ಅರೆದು, ಮೇಲಿನ ಚೂರ್ಣಕ್ಕೆ ಕೂಡಿಸಿಕೊಂಡರೆ ಬಹಳ ಉತ್ತಮವಾದ 'ಫೇಸ್‌ಪೌಡರ್' ಆಗುತ್ತದೆ. ಇದರಲ್ಲಿನ ಸ್ವಲ್ಪ ಚೂರ್ಣವನ್ನು ಹಾಲಿನೊಡನೆ ಅಥವಾ ಹಾಲಿನ ಕೆನೆಯೊಡನೆ ಕೂಡಿಸಿ ಮುಖಕ್ಕೆ ಮೆಲ್ಲನೆ ತಿಕ್ಕಿ ಒಂದು ಗಂಟೆಯನಂತರ ಸ್ವಲ್ಪ ಬಿಸಿಯಾದ ನೀರಿನಿಂಪ ಮುಖವನ್ನು ತೊಳೆದುಕೊಳ್ಳಬೇಕು. ಈ ಪ್ರಯೋಗದಿಂದ ಮುಖದ ಮೇಲಿನ ಕಪ್ಪುಕಲೆ, ಚಿಬ್ಬು ಮುಂತಾದ ದೋಷಗಳು ದೂರವಾಗುತ್ತವೆ. ಆದರೆ ಕೆಲವು ಕಾಲ ಇದನ್ನು ತಪ್ಪದೆ ಉಪಯೋಗಿಸುತ್ತಿರಬೇಕು. ಇಂತಹ ಗುಣಕಾರಿಗಳಾದ ಅನೇಕ ಸುಲಭ ಪ್ರಯೋಗಗಳು ಹಿಂದೆ ಬರೆಯಲ್ಪಟ್ಟಿವೆ. ಅವುಗಳಲ್ಲಿ ಯಾವುದನ್ನಾದರೂ ಕೆಲವು ದಿನಗಳ ವರೆಗೆ ಅನುಸರಿಸಬೇಕಾದುದು ಮುಖ್ಯವಾಗಿದೆ.

---

**ಮಾದಲಹಣ್ಣು** :—ಹುಳಿ ರಸದಿಂದ ಕೂಡಿದ ಈ ಹಣ್ಣು ವಿಶೇಷವಾಗಿ ಪಿತ್ತನಾಶಕವಾಗಿರುತ್ತದೆ. ಮತ್ತು ಇದು ಕಂಠಶೋಧಕವೂ, ನಾಲಗೆ ಹೃದಯವನ್ನು ಶುದ್ಧಿಗೊಳಿಸುವುದೂ ಆಗಿದೆ; ವಾತ-ಕಫ-ಬಾಯಾರಿಕೆ-ಬಿಕ್ಕಳಿಕೆ-ಅರೋಚಕ-ಇವುಗಳನ್ನು ಶಾಂತಗೊಳಿಸುವುದಾಗಿದೆ. ಎಳೆಯ ಕಾಯಿಯು ವಾತ, ಪಿತ್ತ, ಕಫ, ರಕ್ತ ವಿಕಾರಗಳನ್ನುಂಟುಮಾಡುವುದು.

ಸುಪಕ್ವವಾದ ಹಣ್ಣು ಹೃದಯಕ್ಕೆ ಹಿತಕರವಾಗಿರುವುದಲ್ಲದೆ ಹೊಟ್ಟೆಶೂಲೆ- ಅಜೀರ್ಣ- ಮಲಬದ್ಧತೆ- ಮಂದಾಗ್ನಿ-ಶೋಭೆ-ಕೆಮ್ಮು ಇವುಗಳನ್ನು ನಾಶಗೊಳಿಸುವುದಾಗಿದೆ ಮತ್ತು ಬಲ, ಪುಷ್ಟಿಗಳನ್ನುಂಟುಮಾಡತಕ್ಕುದಾಗಿದೆ.

ಇದರ ಕೇಸರದ ರಸದಿಂದ ಪಾರ್ಶ್ವಗಳ ಮತ್ತು ಕಿಬ್ಬೊಟ್ಟೆಯ ಶೂಲೆ, ವಾಂತಿ, ಅರೋಚಕ, ಮುಂತಾದವುಗಳು ಶಾಂತವಾಗುವುವು.

ಇದರ ಬೀಜವು ಗರ್ಭವನ್ನು ಸ್ಥಿರಗೊಳಿಸುವುದಲ್ಲದೆ ಮೂಲವ್ಯಾಧಿ, ಶೋಭೆಗಳನ್ನು ಶಮನಗೊಳಿಸುವುದಾಗಿದೆ.

ಇದರ ಬೇರು—ಮೂಲವ್ಯಾಧಿ, ಕ್ರಿಮಿರೋಗ, ಕಾಲರಾ, ಮಲಬದ್ಧತೆ, ಶೂಲರೋಗ, ಇವುಗಳನ್ನು ಶಾಂತಗೊಳಿಸತಕ್ಕದಾಗಿದೆ.

ಇದರ ಹೂವು—ಜಠರಾಗ್ನಿಯನ್ನು ವೃದ್ಧಿಗೊಳಿಸಿ ಮತ್ತು ವಾತ, ಪಿತ್ತಗಳ ವಿಕಾರವನ್ನು ಶಾಂತಗೊಳಿಸಿ ಶರೀರಕ್ಕೆ ತಂಪನ್ನುಂಟುಮಾಡುವುದಾಗಿದೆ.

೧. ಸೈಂಧವಲವಣ, ಹಿಂಗು, ಹಿಪ್ಪಲಿ, ಮೆಣಸು, ಯವಕ್ಷಾರ, ಓಮ (ಅಜವಾನ) ಕರಿಯ ಜೀರಿಗೆ (ಸ್ಯಾಹಜೀರಾ) ಪ್ರತಿಯೊಂದು ಒಂದೊಂದು ತೊಲದಂತೆ ತಂದು ಕುಟ್ಟಿ ಶೋಧಿಸಿಕೊಂಡು ಆ ಚೂರ್ಣವನ್ನು ಮಾದಲ ಹಣ್ಣಿನ ರಸದಲ್ಲಿ ೩ ಗಂಟೆಗಳ ಕಾಲ ಅರೆದು ಸಣ್ಣಬೋರೆ (ಎಲಚಿ) ಹಣ್ಣಿನಷ್ಟು ಗುಳಿಗೆಗಳನ್ನು ಮಾಡಿ ನೆರಳಿನಲ್ಲಿ ಒಣಗಿಸಿ ಇಟ್ಟುಕೊಳ್ಳಬೇಕು. ದಿನಕ್ಕೆರಡು ಸಲ ಒಂದೊಂದು ಗುಳಿಗೆಯನ್ನು ಬಿಸಿನೀರಿನೊಡನೆ ನುಂಗುವುದರಿಂದ ಹೊಟ್ಟೆಯ ಎಡ ಭಾಗದಲ್ಲಿ ಬೆಳೆದಿರುವ ಗಡ್ಡೆಯು (ಪ್ಲೀಹ) ಕರಗುತ್ತದೆ ಮತ್ತು ಹೊಟ್ಟೆಯಲ್ಲಿ ಸೇರಿರುವ ವಾಯುವು ಜೀರ್ಣಿಸುತ್ತದೆ.

೨. ಮಾದಲ ಹಣ್ಣಿನ ರಸ, ತುಂಬೆಯ ರಸ, ಪರಳಿ ಹಣ್ಣಿನ ರಸ, ಈ ಮೂರು ರಸಗಳನ್ನು ಸಮವಾಗಿ ಕೂಡಿಸಿ ಅದರಲ್ಲಿ ಸಕ್ಕರೆಯನ್ನು ಹಾಕಿ ಎಳೆಪಾಕವನ್ನು ಮಾಡಿ ಸೀಸೆಯಲ್ಲಿ ಇಟ್ಟುಕೊಳ್ಳಬೇಕು. ಈ ಶರಬತ್ತನ್ನು ಪ್ರತಿ ದಿನದ ಪ್ರಾತಃಕಾಲ ಸಾಯಂಕಾಲಗಳಲ್ಲಿ ಒಂದೊಂದು ತೊಲದಂತೆ ಸಮಭಾಗದ ನೀರಿನೊಡನೆ ಕುಡಿಯುತ್ತಿದ್ದರೆ ಕೆಲವು ದಿನಗಳಲ್ಲಿ ಪಿತ್ತದ ವಿಕಾರ, ಅಜೀರ್ಣ, ಮಂದಾಗ್ನಿ, ಹೊಟ್ಟೆಯುಬ್ಬರ ಮುಂತಾದ ತೊಂದರೆಗಳು ನಾಶವಾಗಿ ಜೀರ್ಣಶಕ್ತಿಯು ಕ್ರಮಗೊಳ್ಳುತ್ತದೆ.

೩. ಮಾದಲದ ಗಿಡದ ಬೇರು ಮತ್ತು ಬಾವಂಚಿ ಗಿಡದ ಬೇರು ಇವೆರಡನ್ನು ಸಮವಾಗಿ ತಂದು ನೀರಿನೊಡನೆ ಅರೆದು ಬತ್ತಿಯನ್ನು ಮಾಡಿ ಹುಳುಕು ಹಲ್ಲಿನೊಳಗೆ ಇಟ್ಟರೆ ಅಥವಾ ಆ ಬತ್ತಿಯನ್ನು ಹಲ್ಲುಗಳಿಂದ ಅಗಿದರೆ ಹಲ್ಲಿನ ನೋವು ಕೂಡಲೇ ಕಡಿಮೆಯಾಗುತ್ತದೆ ಮತ್ತು ಹುಳಗಳು ಸಾಯುತ್ತವೆ.

೪. ಮಾದವಾಳದ ಹಣ್ಣಿನ ರಸ, ಶುಂಠಿ, ಪಾರಿವಾಳದ ಹಿಕ್ಕೆ, ಹರತಾಳ (ಅರದಳ) ಮತ್ತು ಸೈಂಧವಲವಣ, ಇವುಗಳನ್ನು ನುಣ್ಣಗೆ ಅರೆದು ಗುಳಿಗೆಗಳನ್ನು ಮಾಡಿ ನೆರಳಿನಲ್ಲಿ ಒಣಗಿಸಿ ಇಟ್ಟು ಕೊಳ್ಳಬೇಕು. ಚೇಳು ಕಡಿದಾಗ ಒಂದು ಗುಳಿಗೆಯನ್ನು ನೀರಿ ನೊಡನೆ ಅರೆದು ಲೇಪಿಸಿದರೆ ಕೂಡಲೇ ವಿಷವು ಇಳಿಯುತ್ತದೆ.

೫. ಮಾದಲದ ಹಣ್ಣಿನ ರಸದಲ್ಲಿ, ಹಿಂಗು, ಹರತಾಳ ಇವೆರಡನ್ನು ಸಮಭಾಗವಾಗಿ ಅರೆದು ಗುಳಿಗೆಗಳನ್ನು ಮಾಡಿ ಒಣಗಿಸಿ ಇಟ್ಟುಕೊಳ್ಳಬೇಕು. ಯಾರಿಗಾದರೂ ಚೇಳು ಕಡಿದಾಗ ಈ ಒಂದೆರಡು ಗುಳಿಗೆಗಳನ್ನು ನೀರಿನೊಡನೆ ಅರೆದು ಕುಟು ಕಿರುವ ಭಾಗಕ್ಕೆ ಹಚ್ಚುವುದರಿಂದ ಮತ್ತು ಕಣ್ಣುಗಳಿಗೆ ಅಂಜನ ದಂತೆ ಹಚ್ಚುವುದರಿಂದ ವಿಷವು ಇಳಿದುಹೋಗುತ್ತದೆ.

ಇದರ ಬೇರು—ಮೂಲವ್ಯಾಧಿ, ಕ್ರಿಮಿರೋಗ, ಕಾಲರಾ, ಮಲಬದ್ಧತೆ, ಶೂಲರೋಗ, ಇವುಗಳನ್ನು ಶಾಂತಗೊಳಿಸತಕ್ಕುದಾ ಗಿದೆ.

---

ಚಕ್ಕೋತಹಣ್ಣು—ಇದರಲ್ಲಿ ಕೆಂಪು ಮತ್ತು ಬಿಳಿಯ ಬಣ್ಣದ ಎರಡು ಜಾತಿಗಳಿವೆ. ಕೆಲವು ಹುಳಿಯಾಗಿಯೂ ಕೆಲವು ಸಿಹಿಯಾ ಗಿಯೂ ಇರುತ್ತವೆ. ಈ ಹಣ್ಣು ರಕ್ತದ ವಾಂತಿಗೆ ಮತ್ತು ಮೂಗು ಆಸನಗಳಿಂದ ಬೀಳುತ್ತಿರುವ ರಕ್ತಕ್ಕೆ ಶಾಂತಿಕರವಾಗಿರುತ್ತದೆ ಮತ್ತು ಕ್ಷಯ, ಬಿಕ್ಕಳಿಕೆ, ಬುದ್ಧಿವಿಕಾರ, ಉನ್ಮಾದ (ಹುಚ್ಚು) ಈ ರೋಗಗ ಳುಳ್ಳವರಿಗೆ ಬಹಳ ಲಾಭಕರವಾಗಿರುತ್ತದೆ. ಬೇಗನೆ ಜೀರ್ಣಿಸು ವುದಲ್ಲ.

---

ಅನಾನಸ್ :—ಹುಳಿ ಮತ್ತು ಸಿಹಿರಸದಿಂದ ಕೂಡಿರುವ ಈ ಹಣ್ಣು ಪಿತ್ತವಿಕಾರ, ದಾಹ, ಅರೋಚಕ, ಅಜೀರ್ಣಗಳನ್ನು ಶಾಂತಗೊಳಿಸುವುದು ಮತ್ತು ಮೇಹವ್ಯಾಧಿಯವರಿಗೆ ಲಾಭಕರ ವಾಗಿರುವುದು. ಅನಾನಸ್-ಗಂಟಲಿನ ರೋಗಗಳಿಗೆ ದಿವ್ಯೌಷಧ ವಾಗಿದೆ. ಅದರಲ್ಲಿಯೂ ಕಂಠರೋಹಿಣಿಯೆಂಬ ರೋಗಕ್ಕೆ ವಿಶೇಷ ಗುಣಕಾರಿಯಾಗಿದೆ.

ಗಂಟಲಿನಲ್ಲಿ ಕಂಠರೋಹಿಣಿ (ಡಿಫ್ಥೀರಿಯಾ) ಎಂಬ ಒಂದು ವಿಧವಾದ ರೋಗವು ಬರುತ್ತದೆ. ಇದು ಮಕ್ಕಳಿಗೇ ಹೆಚ್ಚಾಗಿ ಬರುವುದುಂಟು. ಈ ಸಾಂಕ್ರಾಮಿಕ ರೋಗವು ಯೂರೋಪ್ ದೇಶದಿಂದ ಬಂದಿರುವುದಾಗಿದೆ. ಇದು ಕ್ರಿಮಿಗಳ ಮೂಲಕ ಆಕ್ರಮಿಸುತ್ತದೆ. ಈ ಕ್ರಿಮಿಗಳು ಗಂಟಲು ಮತ್ತು ಮೂಗಿನೊಳಗೆ ಗಾಯವನ್ನುಂಟು ಮಾಡಿ ಒಂದು ವಿಧವಾದ ವಿಷವನ್ನು ಹುಟ್ಟಿಸುತ್ತವೆ. ಈ ವಿಷವು ಹೃದಯಕ್ಕೆ ಸೇರುವುದರಿಂದ ಬಹಳ ತೊಂದರೆಯುಂಟಾಗುತ್ತದೆ.

ಈ ರೋಗವು ಚಮಚಾ ಮತ್ತು ಕಪ್ಪುಗಳ ಮೂಲಕವೂ, ಎಂಜಲ ಪದಾರ್ಥಗಳ ಮೂಲಕವೂ ಒಂದು ಮಗುವಿನಿಂದ ಮತ್ತೊಂದು ಮಗುವಿಗೆ ಹಬ್ಬುತ್ತದೆ. ಮಕ್ಕಳು ಪ್ರಾಯಃ ಸೀಟಿ, ಪೀಪಿ, ಅಥವಾ ಕೊಳಲು, ಮುಂತಾದ ಆಟದ ಸಾಮಾನುಗಳನ್ನು ಬಾಯಿಯಲ್ಲಿಟ್ಟುಕೊಂಡು ಆಡುತ್ತಿರುತ್ತವೆ. ಇವುಗಳ ಮೂಲಕವೂ ರೋಗವು ಆಕ್ರಮಿಸುವುದುಂಟು ಮತ್ತು ಪೆನ್ಸಿಲ್ ಅಥವಾ ಬೆರಳನ್ನು ಬಾಯಿಯಲ್ಲಿ ಇಟ್ಟುಕೊಳ್ಳುವ ಅಭ್ಯಾಸದಿಂದಲೂ ಈ ರೋಗವು ಬರುವುದುಂಟು. ಒಂದು ಮಗುವಿಗೆ ರೋಗವು ಬಂದಿರುವಾಗ ಅದು ಕೆಮ್ಮುತ್ತದೆ; ಆ ಕೆಮ್ಮಿನ ಮೂಲಕ ಲಕ್ಷಾಂತರ ಕ್ರಿಮಿಗಳು ಹೊರಗೆ ಬಂದು ರೋಗಿಯ ಕೋಣೆಯಲ್ಲಿ ವ್ಯಾಪಿಸುತ್ತವೆ. ಆದುದರಿಂದ ನಿರೋಗಿಗಳಾದ ಮಕ್ಕಳನ್ನು ರೋಗಿಯ ಹತ್ತಿರಕ್ಕೆ ಬಿಡಬಾರದು ಮತ್ತು ರೋಗಿಯನ್ನು ಬೆಳಕು ಗಾಳಿ ಇರುವ ಪ್ರತ್ಯೇಕವಾದ ಕೋಣೆಯಲ್ಲಿ ಮಲಗಿಸುವುದುತ್ತಮ. ಈ ರೋಗವು ದೊಡ್ಡವರಿಗೂ ಬರುತ್ತದೆ. ಆದರೆ ಮಕ್ಕಳೇ ಹೆಚ್ಚಾಗಿ ಈ ರೋಗದ ಬಲೆಯಲ್ಲಿ ಬೀಳುತ್ತಾರೆ.

ಈ ರೋಗವು ಬಂದಾಗ ಅಂಗಳಿನಲ್ಲಿ ಬೂದಿಬಣ್ಣದ ಪರೆಯು ಕಟ್ಟಿಕೊಳ್ಳುತ್ತದೆ. ಇಂತಹ ಸಮಯದಲ್ಲಿ ಅನಾನಸ್ಸು ಬಹಳ ಲಾಭಕರವಾಗಿದೆ.

ಈ ಹಣ್ಣನ್ನು ಕುಟ್ಟಿ ರಸವನ್ನು ತೆಗೆದು ಗಾಜಿನ ಪಾತ್ರೆಯಲ್ಲಿಡಬೇಕು. ಮೊದಲು ಬಿಸಿ ನೀರಿನಿಂದ ರೋಗಿಯ ಬಾಯಿಯನ್ನು ತೊಳೆದು ಅನಂತರ ಬೆಳ್ಳಿಯ ಚಮಚದ ಮೂಲಕ ರಸವನ್ನು

ಬಾಯಿಯಲ್ಲಿ ಹಾಕಬೇಕು. ಮೊದಲನೆಯ ಸಲ ರಸವು ಗಂಟಲಿನೊಳಕ್ಕೆ ಹೋಗದಿದ್ದರೆ ಅದು ಬಾಯಿ ಮತ್ತು ಗಂಟಲನ್ನು ತೊಳೆಯುವ ಕೆಲಸವನ್ನೇನೋ ಅವಶ್ಯವಾಗಿ ಮಾಡುತ್ತದೆ. ಈ ರಸವು ಒಳಗೆ ಕಟ್ಟಿರುವ ಪರೆಯನ್ನು ಕತ್ತರಿಸುತ್ತದೆ. ಸಾಧ್ಯವಾದರೆ ಆ ಪರೆಯನ್ನು ಬೆಳ್ಳಿಯ ಸಣ್ಣ ಚಮಚದ ತುದಿಯಿಂದ ಕೆರೆಯಬಹುದು. ಆದರೆ ಬಹು ಸಾವಧಾನದಿಂದ ಈ ಕೆಲಸವನ್ನು ಮಾಡಬೇಕು. ರೋಗಿಗೆ ನೋವಾಗದಂತೆ ಮೆಲ್ಲನೆ ಕೆರೆದು ಅನಂತರ ಮತ್ತೊಮ್ಮೆ ರಸವನ್ನು ಚಮಚದ ಮೂಲಕ ಹಾಕಿದರೆ ಆಗ ರಸವು ಗಂಟಲಿನೊಳಕ್ಕೆ ಆಯಾಸವಿಲ್ಲದೆ ಹೋಗುತ್ತದೆ. ಮತ್ತೆ ಕೆರೆಯುವ ಕೆಲಸವು ಮಾತ್ರ ಮೆಲ್ಲನೆ ನಡೆಯುತ್ತಲೇ ಇರುವುದು ಉತ್ತಮ. ಈ ಕೆಲಸಕ್ಕೆ ಬೆಳ್ಳಿಯ ಚಮಚವನ್ನೇ ಉಪಯೋಗಿಸಬೇಕು ಮತ್ತು ಆ ಚಮಚವನ್ನು ಪ್ರತಿಯೊಂದು ಸಲವೂ ಸುಡುತ್ತಿರುವ ನೀರಿನಲ್ಲಿ ಮುಳುಗಿಸಿ ಸ್ವಚ್ಛಗೊಳಿಸುತ್ತಿರಬೇಕು.

ಆರು ತಿಂಗಳುಗಳ ಮಗುವೂ ಕೂಡ ಈ ರಸವನ್ನು ಹಾಲಿಗೆ ಬದಲಾಗಿ ಬಹು ಅಕ್ಕರೆಯಿಂದ ಕುಡಿಯುತ್ತದೆ. ಆದರೆ ಈ ರೋಗದಿಂದ ಆಕ್ರಮಿಸಲ್ಪಟ್ಟವರು ಮಾತ್ರ ಈ ರಸವನ್ನು ಕುಡಿಯಲಾರರು. ಈ ರಸವು ಚರ್ಮವನ್ನು ಕರಗಿಸಿ ಅದನ್ನು ಹೊರಪಡಿಸುವುದರಲ್ಲಿ ಹೆಸರುಗೊಂಡಿದೆ. ಇದರ ಸಣ್ಣ ಚೂರುಗಳನ್ನು ಜೇನುತುಪ್ಪದಲ್ಲಿ ಹಾಕಿ ಎರಡು ಮೂರು ದಿನಗಳ ವರೆಗೆ ಬಿಟ್ಟಿದ್ದು ಅನಂತರ ತಿನ್ನಬಹುದು. ಇದರ ಸೇವನೆಯಿಂದ ವರ್ಷಾಂತರಗಳಿಂದ ಆಶ್ರಯಿಸಿರುವ ಯಕೃತ್ತಿನ (ಲೀವರಿನ) ತೊಂದರೆಯು ಖಂಡಿತವಾಗಿ ಸರಿಪಡುತ್ತದೆ. ಹಣ್ಣಿನ ಸುಗ್ಗಿಯಲ್ಲಿ ಇದನ್ನು ಊಟಕ್ಕೆ ಮೊದಲು ತಿನ್ನುವುದು ಬಹಳ ಗುಣಕಾರಿಯಾಗಿದೆ. ಇದನ್ನು ಕತ್ತರಿಸಿ, ಜೇನುತುಪ್ಪದಲ್ಲಿ ಹಾಕಿಟ್ಟಿದ್ದು ಹೊಸ ಹಣ್ಣು ಸಿಗದಿರುವ ಕಾಲದಲ್ಲಿ ಸೇವಿಸಲೂ ಬಹುದು. ಗಂಟಲಿನ ಉರಿಗೆ ಈ ಹಣ್ಣು ವಿಶೇಷ ಲಾಭವನ್ನು ಕೊಡುತ್ತದೆ. ಒಂದು ಹಣ್ಣಿನಿಂದ ಸುಮಾರು ಅರ್ಧ ಸೇರು ರಸವು ಬರುತ್ತದೆ. ಲೀವರಿನ ತೊಂದರೆಯವರು ಈ ಹಣ್ಣನ್ನು ಅಥವಾ ರಸವನ್ನು ಅವಶ್ಯವಾಗಿ ಉಪಯೋಗಿಸ

ಬೇಕು. ಇದರಿಂದ ಬಹುಬೇಗನೆ ಪಚನ ಶಕ್ತಿಯು ಕ್ರಮಗೊಳ್ಳು ತ್ತದೆ.

---

**ಟೊಮೇಟೋ ಹಣ್ಣು**--ಇದು ಶರೀರದ ರೋಮಕೂಪಗಳನ್ನು ಶುದ್ಧಗೊಳಿಸುವುದಲ್ಲದೆ ರಕ್ತವನ್ನೂ ಶುದ್ಧಗೊಳಿಸುವುದು, ಲೀವರಿನ ತೊಂದರೆಗೆ ಬಹಳ ಗುಣಕಾರಿಯಾದುದು, ಮೇಹಶಾಂತಿಯನ್ನು ಮಾಡುವುದು, ಜಠರಾಗ್ನಿಯನ್ನು ಹೆಚ್ಚಿಸುವುದು, ಮತ್ತು ಶ್ವಾಸ, ಕ್ಷಯ, ರಕ್ತಕ್ಷಯ (ಎನಿಮಿಯಾ) ರೋಗಿಗಳಿಗೆ ಹಿತಕರವಾಗಿದೆ. ಈ ಹಣ್ಣನ್ನು ಬೇಯಿಸಿ ಪೋಲ್ಟೀಸಿನಂತೆ ಮಾಡಿ ಕುರಗಳಿಗೆ ಅಥವಾ ಇತರ ವಿಧದ ಗಡ್ಡೆಗಳಿಗೆ ಕಟ್ಟುವುದರಿಂದ ಅವು ಬೇಗನೆ ಪಕ್ವವಾಗಿ ಒಡೆಯುತ್ತವೆ. ಆದರೆ ಪೋಲ್ಟೀಸನ್ನು ಬಿಸಿ ಬಿಸಿಯಾಗಿರುವುದನ್ನೇ ಕಟ್ಟಬೇಕು. ಆರಿದ ಕೂಡಲೇ ಅದನ್ನು ತೆಗೆದು ಹಾಕಿ ಬಿಸಿಯಾಗಿರುವುದನ್ನು ಕಟ್ಟುತ್ತಿದ್ದರೆ ವಿಶೇಷಪ್ರಯೋಜನವುಂಟಾಗುತ್ತದೆ. ಈ ಹಣ್ಣಿನ ರಸವನ್ನು ಉಪ್ಪು, ಮೆಣಸುಗಳ ಚೂರ್ಣದ ಜತೆಗಾಗಲಿ, ಸಕ್ಕರೆಯ ಜತೆಗಾಗಲಿ ಸೇವಿಸಬಹುದು. ಟೊಮೇಟೋಗಳನ್ನು ತರಕಾರಿಯಂತೆ ವಿಶೇಷವಾಗಿ ಉಪಯೋಗಿಸುವುದು ಮಂದಾಗ್ನಿಯುಳ್ಳವರಿಗೆ ಲಾಭದಾಯಕವಾಗಿದೆ. ಹಣ್ಣನ್ನು ಬಜ್ಜಿ, ಸಾರು ಮುಂತಾದ ರೂಪದಿಂದುಪಯೋಗಿಸುವುದೂ ಲಾಭಕರವಾಗಿದೆ. ಈ ಹಣ್ಣಿನ ರಸಕ್ಕೆ ಸಕ್ಕರೆಯನ್ನು ಹಾಕಿ ಎಳೆಪಾಕದ ಶರಬತ್ತನ್ನು ಮಾಡಿ ಸೀಸೆಯಲ್ಲಿಟ್ಟುಕೊಳ್ಳಬಹುದು. ರಕ್ತವೃದ್ಧಿಯಿಲ್ಲದ ಮಕ್ಕಳಿಗೆ ಇದನ್ನು ಹಾಲು ಅಥವಾ ನೀರಿನೊಡನೆ ಕುಡಿಸಿದರೆ ಮಕ್ಕಳು ಬಹಳ ಚೆನ್ನಾಗಿ ಬೆಳೆಯುತ್ತವೆ. ಉತ್ತರ ಭಾರತದ ಕೆಲವು ಪಟ್ಟಣಗಳಲ್ಲಿ ಈ ಹಣ್ಣಿನ ಶರಬತ್ತು ಬಹಳ ಪ್ರಚಾರದಲ್ಲಿದೆ. ಟೊಮೇಟೋ ಸೊಪ್ಪನ್ನು ಅರೆದು ಕುರಗಳಿಗೆ ಮತ್ತು ಗಡ್ಡೆಗಳಿಗೆ ಕಟ್ಟುವುದೂ ಲಾಭಕರವಾಗಿದೆ.

---

# ಹಾಲು

ದಯಾನಿಧಿಯಾದ ಪರಮೇಶ್ವರನು ಜೀವಿಗಳ ಪ್ರಾಣಧಾರಣೆಗಾಗಿ ಅನೇಕವಿಧ ವಸ್ತುಗಳನ್ನು ನಿರ್ಮಿಸಿರುವನು ಆದರೆ ಅವುಗಳೆಲ್ಲಲ್ಲಾ ಹಾಲು ಅತ್ಯಂತ ಶ್ರೇಷ್ಠವಾಗಿರುತ್ತಧೆ. ಹುಟ್ಟಿದಂದಿನಿಂದ ಅನ್ನಪ್ರಾಶನ ಸಂಸ್ಕಾರವಾಗುವ ವರೆಗೂ ಮಕ್ಕಳಿಗೆ ಹಾಲೇ ಜೀವನಾಧಾರವಾಗಿರುತ್ತದೆ. ರೋಗಿಗಳಿಗೂ, ನಿರೋಗಿಗಳಿಗೂ, ಬಾಲಕರಿಗೂ, ತರುಣರಿಗೂ, ವೃದ್ಧರಿಗೂ, ಬಲಶಾಲಿಗಳಿಗೂ, ನಿರ್ಬಲರಿಗೂ, ಅವರವರ ಇಷ್ಟಾರ್ಥವನ್ನೀಯುವುದರಲ್ಲಿ ಹಾಲು ಸುರತರುವಿನಂತಿದೆ. ಆದುದರಿಂದಲೇ ಜೀವಿಗಳ ಜೀವನವೆಂಬ ಅಮೂಲ್ಯವಸ್ತುವು ಇದರಲ್ಲಡಕವಾಗಿರುತ್ತದೆ. ಮತ್ತು ಸಕಲ ಜೀವಿಗಳ ಆರೋಗ್ಯವನ್ನು ಸ್ಥಿರಗೊಳಿಸಲು ಹಾಲು ರಸಾಯನಸ್ವರೂಪವಾಗಿರುವುದೆಂದು ಚರಕಸಂಹಿತೆಯ ಸೂತ್ರ ಸ್ಥಾನದಲ್ಲಿ "ಪ್ರವರಂ ಜೀವನೀಯಾನಾಂ ಕ್ಷೀರಮುಕ್ತಂ ರಸಾಯನಂ" ಎಂದು ವರ್ಣಿತವಾಗಿರುತ್ತದೆ.

ಹಾಲುಗಳಲ್ಲಿ ಆಕಳಿನ ಹಾಲು ಪಥ್ಯವಾಗಿರುವುದು; ಅದರಲ್ಲಿಯೂ ಕರಿಯ ಆಕಳಿನ ಹಾಲು ವಿಶೇಷ ಪಥ್ಯವಾಗಿದ್ದು ವಾಯುವನ್ನು ಶಾಂತಗೊಳಿಸುವುದರಲ್ಲಿ ಅದ್ವಿತೀಯವಾಗಿರುತ್ತದೆ. ಬಿಳಿಯ ಆಕಳಿನ ಹಾಲು ಸ್ವಲ್ಪ ಕಫವನ್ನುಂಟುಮಾಡುವುದಲ್ಲದೆ ಭಾರವಾಗಿರುತ್ತದೆ. ಕೆಂಪು ಆಕಳಿನ ಮತ್ತು ಚಿತ್ರವರ್ಣದ ಆಕಳಿನ ಹಾಲು ಕರಿಯ ಆಕಳಿನ ಹಾಲಿಗಿಂತಲೂ ಗುಣದಲ್ಲಿ ಸ್ವಲ್ಪ ಕಡಿಮೆಯಾಗಿರುತ್ತದೆ.

ಎಮ್ಮೆಯ ಹಾಲು ಆಕಳಿನ ಹಾಲಿಗಿಂತಲೂ ಮಧುರವಾಗಿಯೂ, ಜಠರಾಗ್ನಿಯನ್ನು ಮಂದಗೊಳಿಸುವುದಾಗಿಯೂ, ಅತ್ಯಂತ ನಿದ್ರೆಯನ್ನುಂಟುಮಾಡುವುದಾಗಿಯೂ, ವೀರ್ಯ ಮತ್ತು ಶ್ಲೇಷ್ಮವನ್ನು ಹೆಚ್ಚಿಸುವುದಾಗಿಯೂ, ಬಹಳ ಶೀತಲವಾಗಿಯೂ, ತೀಕ್ಷ್ಣಾಗ್ನಿಯುಳ್ಳವರಿಗೆ ಮಾತ್ರ ಹಿತಕರವಾಗಿಯೂ, ಇರುತ್ತದೆ.

ಆಡಿನ ಹಾಲು ಬಹಳ ಹಗುರವಾಗಿರುವುದು. ಆಡುಗಳು ಕಾಡಿನಲ್ಲಿ ನಾನಾವಿಧ ಗಿಡಗಳನ್ನೂ ಅನೇಕ ವನಸ್ಪತಿಗಳನ್ನೂ

ತಿಂದು ನೀರನ್ನು ಸ್ವಲ್ಪವೇ ಕುಡಿದು ವಿಶೇಷವಾಗಿ ಸಂಚರಿಸತಕ್ಕವು ಗಳಾಗಿರುವುದರಿಂದ ಅವುಗಳ ಹಾಲು ಸಕಲ ದೋಷಗಳನ್ನು ಹರಣ ಮಾಡುವ ಶಕ್ತಿಯಿಂದ ಕೂಡಿ, ಪ್ರಮೇಹ-ಕೆಮ್ಮು-ಗಂಟಲಿನ ರೋಗ ಇವುಗಳನ್ನು ನಾಶಮಾಡುತ್ತದೆ. ಮತ್ತು ಕೀವಾಗಿರುವ ಹೃದಯ-ವ್ರಣದಿಂದ ಬಳಲುತ್ತಿರುವವರಿಗೆ ಅತ್ಯಂತ ಹಿತಕರವಾಗಿರುತ್ತದೆ.

ಆಗಲೇ ಹಿಂಡಿದ ಆಕಳಿನ ಸೊರೆಹಾಲು (ಧಾರೋಷ್ಣಕ್ಷೀರ) ತ್ರಿದೋಷಗಳನ್ನು ನಿವಾರಿಸಿ, ಅಗ್ನಿಯನ್ನು ದೀಪನಗೊಳಿಸಿ, ಶರೀರದಲ್ಲಿ ಬಲ ಮತ್ತು ಸ್ಫೂರ್ತಿಯನ್ನುಂಟುಮಾಡುತ್ತದೆ. ಯಾವ ಹಾಲನ್ನೇ ಆಗಲಿ ಹಿಂಡಿದ ೩ ಗಂಟೆಗಳ ನಂತರ ಕಾಯಿಸದೆ ಕುಡಿಯುವುದರಿಂದ ತ್ರಿದೋಷಗಳು ಕೋಪಗೊಂಡು ನಾನಾವಿಧ ಉಪದ್ರವಗಳನ್ನುಂಟು ಮಾಡುವುವು. ಎಮ್ಮೆ ಮತ್ತು ಆಕಳಿನ ಹಸಿಯ ಹಾಲು-ವ್ಯಾಯಾ ಮವನ್ನು ಮಾಡುವವರಿಗೂ, ಬಲಶಾಲಿಗಳಿಗೂ ಹಿತಕರವಲ್ಲದೆ ಇತ ರರಿಗೆ ಅಗ್ನಿಮಾಂದ್ಯವನ್ನುಂಟುಮಾಡುತ್ತದೆ.

ಹಾಲನ್ನು ಪ್ರಾತಃಕಾಲದಲ್ಲಿ ಕುಡಿಯುವುದರಿಂದ ಬಲ ಮತ್ತು ಅಗ್ನಿಯು ವೃದ್ಧಿಯಾಗುತ್ತದೆ : ಮಧ್ಯಾಹ್ನದಲ್ಲಿ ಕುಡಿಯುವುದರಿಂದ ವಾತಪಿತ್ತಗಳು ಶಾಂತವಾಗಿ ಅಗ್ನಿಬಲವು ಹೆಚ್ಚಾಗುತ್ತದೆ; ರಾತ್ರಿಯಲ್ಲಿ ಮಲಗುವಾಗ ಕುಡಿಯುವುದರಿಂದ ಶರೀರದ ಕ್ಷೀಣತೆಯು ನಾಶವಾಗು ತ್ತದೆ. ರಾತ್ರಿಯ ಕ್ಷೀರಪಾನವು ಬಾಲಕರಿಗೂ ವೃದ್ಧರಿಗೂ ವಿಶೇಷ ಫಲದಾಯಕವಾಗಿರುತ್ತದೆ. ಹಗಲು ಮತ್ತು ರಾತ್ರಿಯಲ್ಲಿ ಸೇವಿ ಸುವ ಆಹಾರದಲ್ಲಿನ ಉಪ್ಪು, ಕಾರ, ಹುಳಿ ಮೊದಲಾದ ರಸಗಳಿಂದ ಪಿತ್ತವು ಕುಪಿತವಾಗುವುದು ; ಈ ಕುಪಿತವಾಗಿರುವ ಪಿತ್ತವನ್ನು ಶಾಂತಿಮಾಡುವುದಕ್ಕಾಗಿಯೇ ರಾತ್ರಿಯ ಕ್ಷೀರಪಾನವು ಸರ್ವಸಾಧಾ ರಣವಾಗಿ ಹಿತಕರವೆಂದು ಆಯುರ್ವೇದವು ಉಪದೇಶಿಸುತ್ತದೆ. ಮಂದಾಗ್ನಿಯುಳ್ಳವರು ಕೆನೆಯನ್ನು ತೆಗೆದು ಹಾಲನ್ನು ಕುಡಿಯು ವುದುತ್ತಮ. ಬಲಶಾಲಿಗಳೂ, ತೀಕ್ಷ್ಣವಾದ ಜಠರಾಗ್ನಿಯುಳ್ಳವರೂ, ಕೆನೆಯಿಂದ ಕೂಡಿರುವ ಹಾಲನ್ನು ಕುಡಿಯಬಹುದು. ಬಣ್ಣವು ಬದಲಾಯಿಸಿರುವ, ಒಡೆದುಹೋಗಿರುವ, ಉಪ್ಪು ಬಿದ್ದಿರುವ, ಹಾಲನ್ನು ಕುಡಿಯುವುದರಿಂದ ಬುದ್ಧಿಯು ಕ್ಷೀಣವಾಗುವುದಲ್ಲದೆ ಅನೇಕ ರೋಗಗಳುಂಟಾಗುತ್ತವೆ.

ಮಕ್ಕಳಿಗೆ ತಾಯಿಯ ಹಾಲು ಸಾಲದಿದ್ದರೆ ಆಡಿನ ಹಾಲನ್ನು ತಂದು ಸಮಭಾಗದ ನೀರನ್ನು ಕೂಡಿಸಿ ಚೆನ್ನಾಗಿ ಕಾಯಿಸಿ, ಆರಿದ ನಂತರ ಸ್ವಲ್ಪ ಕಲ್ಲುಸಕ್ಕರೆಯನ್ನು ಹಾಕಿ ಕುಡಿಸಬಹುದು. ಆಡಿನ ಹಾಲಿನ ಅಭಾವದಲ್ಲಿ ಆಕಳಿನ ಶುದ್ಧವಾದ ಹಾಲನ್ನೇ ಮೇಲೆ ಬರೆದಿರುವಂತೆ ಸಂಸ್ಕರಿಸಿ ಕುಡಿಸಬಹುದು. ಈಗಿನ ನವೀನ ಸಭ್ಯತೆಯ ಕಾಲದಲ್ಲಿ ವಿದೇಶಗಳಿಂದ ಡಬ್ಬಿಯಲ್ಲಿ ಬರುತ್ತಿರುವ ಗಟ್ಟಿಯಾದ, ಕೃತ್ರಿಮವಾದ, ಹಾಲು ಹೊಸಹೊಸದಾಗಿ ಹಿಂಡಿದ ಹಸುವಿನ ಹಾಲಿನಷ್ಟು ಲಾಭಕರವಲ್ಲವೆಂಬುದು ಖಂಡಿತ.

ಹಾಲಿನ ಪರಿಶುದ್ಧತೆಯ ಕಡೆಗೆ ವಿಶೇಷ ಲಕ್ಷ್ಯವನ್ನಿಡುವುದು ವಿಹಿತವಾಗಿದೆ. ಸಾಮಾನ್ಯವಾಗಿ ಎಲ್ಲೆಡೆಯಲ್ಲಿಯೂ ಪರಿಶುದ್ಧವಾದ ಹಾಲು ದೊರೆಯುವುದು ಅತಿ ಕಷ್ಟವಾಗಿದೆ. ವ್ಯಾಪಾರಿಗಳು ಜನಗಳ ಅಮೂಲ್ಯಜೀವನದ ಮಹತ್ವವನ್ನರಿಯದೆ ಅಮೃತಸದೃಶವಾಗಿರುವ ಹಾಲಿನಲ್ಲಿ ನಾನಾವಿಧ ವಸ್ತುಗಳನ್ನು ಕೂಡಿಸುವುದು ವಾಡಿಕೆಯಾಗಿದೆ!

ಬಜಾರದಲ್ಲಿ ಮಾರುವ ಹಾಲು ದೋಷಯುಕ್ತವಾಗಿ ರೋಗಗಳ ಭಂಡಾರವಾಗಿರುತ್ತದೆ. ದೊಡ್ಡ ದೊಡ್ಡ ನಗರಗಳಲ್ಲಂತೂ ಶುದ್ಧವಾದ ಹಾಲೆಂಬುದು ಸ್ವಪ್ನದ ಮಾತಾಗಿರುತ್ತದೆ. ಯಾವ ಪುಣ್ಯಾತ್ಮರ ಮನೆಯಲ್ಲಿ ಆಕಳುಗಳಿರುವುವೋ ಅವರಿಗೆ ಮಾತ್ರ ಪರಿಶುದ್ಧವಾದ ಹಾಲು ದೊರೆಯಬಹುದು. ಉಳಿದವರಿಗೆ ಬಜಾರದ ಹಾಲೇ ಗತಿಯಾಗಿರುವುದು. ಇಂತಹ ನಿಸ್ಸಾರ ಮತ್ತು ದೋಷಯುಕ್ತವಾಗಿರುವ ಹಾಲನ್ನು ಕುಡಿದು ನಾನಾರೋಗಗಳಿಗೆ ನಿಮಂತ್ರಣವನ್ನು ಕೊಡುವುದಕ್ಕಿಂತ ಶುದ್ಧವಾದ ನೀರನ್ನೇ ಕುಡಿದು ತೃಪ್ತರಾಗುವುದೇ ಉತ್ತಮವಾಗಿದೆ.

**ಹಾಲಿನಿಂದ ರೋಗನಾಶ:**—ಆಕಳಿನ ಹಾಲಿನಲ್ಲಿ ವಿಷಮಭಾಗದ ತುಪ್ಪ ಮತ್ತು ಜೇನುತುಪ್ಪವನ್ನು ಕೂಡಿಸಿ ಅಥವಾ ಸರಿಯಾಗಿ ಕಾಯಿಸಿದ ಹಾಲಿನಲ್ಲಿ ರುಚಿಗೆ ತಕ್ಕಷ್ಟು ಸಕ್ಕರೆಯನ್ನು ಕೂಡಿಸಿ ಕುಡಿಯುವುದರಿಂದ ಶರೀರದ ನಿರ್ಬಲತೆಯು ಹೋಗುತ್ತದೆ.

೨. ಕಣ್ಣುಗಳು ಉರಿಯುತ್ತಿದ್ದರೆ, ನಾಲ್ಕಾರು ಪದರಗಳಿನ್ನು ಮಾಡಿದ ಶುದ್ಧವಾದ ಬಿಳಿಯ ಬಟ್ಟೆಯನ್ನು ಆಕಳಿನ ಶುದ್ಧವಾದ ಹಾಲಿನಲ್ಲಿ ತೋಯಿಸಿ ಕಣ್ಣುಗಳ ಮೇಲಿಟ್ಟು ಅದರ ಮೇಲೆ ಪಟಕದ ಪುಡಿಯನ್ನು ಉದರಿಸಬೇಕು. ಈ ಉಪಚಾರದಿಂದ ನಾಲ್ಕಾರು ದಿನಗಳೊಳಗೆ ಉರಿಯು ಶಾಂತವಾಗುತ್ತದೆ.

೩. ಹಸುವಿನ ಹಾಲನ್ನು ಕಾಯಿಸಿ ಬಿಸಿಬಿಸಿಯಾಗಿರುವುದನ್ನೇ ಕುಡಿಯುವುದರಿಂದ ಬಿಕ್ಕಳಿಕೆಯು ಶಾಂತವಾಗುವುದು.

೪. ಹಸುವಿನ ಹಾಲನ್ನು ಕಾಯಿಸಿ ಸ್ವಲ್ಪ ಬಿಸಿಯಾಗಿರುವಾಗಲೇ ಕಲ್ಲುಸಕ್ಕರೆ ಮತ್ತು ಮೆಣಸಿನಪುಡಿಯನ್ನು ಕೂಡಿಸಿ ಕುಡಿಯುವುದರಿಂದ ನೆಗಡಿಯು ಶಾಂತವಾಗುವುದು.

೫. ಹಸುವಿನ ಹಾಲಿನಲ್ಲಿ ಬಾದಾಮಿಯನ್ನರೆದು ಕೂಡಿಸಿ ರುಚಿಗೆ ತಕ್ಕಷ್ಟು ಕಲ್ಲುಸಕ್ಕರೆಯನ್ನು ಹಾಕಿ ಚೆನ್ನಾಗಿ ಕಾಯಿಸಿ ಕುಡಿಯುವುದರಿಂದ ಅರ್ಧತಲೆಯ ನೋವು ೩-೪ ದಿನಗಳಲ್ಲಿ ಶಾಂತವಾಗುವುದು.

೬. ರಕ್ತದ ವಿಶೇಷ ಉಷ್ಣತೆಯಿಂದ ತಲೆಯಲ್ಲಿ ನೋವುಂಟಾದಾಗ ಆಕಳಿನ ಹಾಲಿನಲ್ಲಿ ಅಗಲವಾಗಿಯೂ, ದಪ್ಪವಾಗಿಯೂ ಮಡಿಸಿದ ಅರಳೆಯನ್ನು ತೋಯಿಸಿ ತಲೆಯ ಮೇಲಿಡುವುದರಿಂದ ವಿಶೇಷ ಲಾಭವುಂಟಾಗುವುದು ಆದರೆ ಸಾಯಂಕಾಲಕ್ಕೆ ತಲೆಯ ಮೇಲಣ ಪಟ್ಟಿಯನ್ನು ತೆಗೆದುಹಾಕಿ ತಲೆಯನ್ನು ನೀರಿನಿಂದ ತೊಳೆದು ಆಕಳಿನ ಬೆಣ್ಣೆಯನ್ನು ತಲೆಗೆ ಹಚ್ಚಿ ತಿಕ್ಕುವುದನ್ನು ಮಾತ್ರ ಮರೆಯಬಾರದು.

೭. ಧತ್ತೂರದ ವಿಷವು ಶರೀರದಲ್ಲಿ ವ್ಯಾಪಿಸಿ ತೊಂದರೆಯುಂಟಾದಾಗ ಆಕಳಿನ ಹಾಲಿನಲ್ಲಿ ಸ್ವಲ್ಪ ಸಕ್ಕರೆಯನ್ನು ಕೂಡಿಸಿ ಕುಡಿಯುವುದರಿಂದ ವಿಷದ ವೇಗವು ಕಡಿಮೆಯಾಗುವುದು.

೮. ಅಶುದ್ಧವಾದ ಗಂಧಕದ ಸೇವನೆಯಿಂದ ಉಪದ್ರವವುಂಟಾದರೆ ಆಕಳಿನ ಹಾಲಿನಲ್ಲಿ ತುಪ್ಪವನ್ನು ಕೂಡಿಸಿ ಕುಡಿಸುವುದರಿಂದ ಗಂಧಕದ ವಿಷವು ಇಳಿಯುವುದು.

೯. ಆಕಳಿನ ಹಾಲಿನಲ್ಲಿ ಒಣಗಿದ ಶುಂಠಿಯನ್ನು ಅರೆದು ಹಣೆಗೆ ದಪ್ಪವಾಗಿ ಲೇಪಿಸುವುದರಿಂದ ಮಿತಿಮೀರಿದ ತಲೆನೋವಿನ ಬಾಧೆಯು ಕಡಿಮೆಯಾಗುವುದು.

೧೦. ಹೊಸಜ್ವರ, ವ್ರಣ, ಕುಷ್ಠ, ಕಫ, ಪ್ರಮೇಹ, ಭಗಂದರ, ಆತಿಸಾರ, ವಿಷೂಚಿ, (ಕಾಲರಾ) ಸಂಗ್ರಹಣಿ, ಅಜೀರ್ಣ, ರಕ್ತಭೇದಿ, ಗಂಟಲಿನ ರೋಗ, ಇವುಗಳಿಂದ ಪೀಡಿತರಾದವರಿಗೆ ಹಾಲು ಹಿತಕರವಲ್ಲ.

೧೧. ವ್ಯಾಧಿಯಿಂದೆದ್ದ ನಂತರ ಅಶಕ್ತಿಯುಳ್ಳವರಿಗೂ, ಗರ್ಭಿಣಿ ಸ್ತ್ರೀಯರಿಗೂ, ಒಣಗಿದ ಶರೀರವುಳ್ಳವರಿಗೂ, ವಿಶೇಷ ಶಾರೀರಕ ಪರಿಶ್ರಮವನ್ನು ಮಾಡುವವರಿಗೂ, ಬಾಲಕರಿಗೂ, ವೃದ್ಧರಿಗೂ, ಅಫೀಮಿನ ದುರಭ್ಯಾಸವುಳ್ಳವರಿಗೂ ಹಾಲು ಅತ್ಯಂತ ಲಾಭದಾಯಕವಾಗಿರುತ್ತದೆ.

೧೨. ಹಸುವಿನ ಹಾಲನ್ನು ಕಾಯಿಸಿ ಆರಿದ ಮೇಲೆ ಅದರಲ್ಲಿ ಒಂದು ತೊಲ ತುಪ್ಪ, ಒಂದು ತೊಲ ಸಕ್ಕರೆ, ಅರ್ಧ ತೊಲ ಜೇನು, ಕಾಲು ತೊಲ ಹಿಪ್ಪಲಿಯಪುಡಿ, ಒಂದು ಚುಟಿಕಿಯಷ್ಟು ಮೆಣಸಿನಪುಡಿ, ಇವುಗಳನ್ನು ಹಾಕಿ ಕುಡಿಯಬೇಕು. ಇದು ರಕ್ತಕ್ಷೀಣ (ಎನಿಮಿಯಾ) ದವರಿಗೆ ಅತ್ಯುತ್ತಮವಾದ ಟಾನಿಕ್ ಆಗಿದೆ. ಇದರಿಂದ ರಕ್ತವೃದ್ಧಿಯಾಗುತ್ತದೆ, ಮತ್ತು ಕ್ಷಯದ ಮೊದಲನೆ ಭಾಗದಲ್ಲಿ ಈ ಹಾಲು ಬಹಳ ಪ್ರಯೋಜನಕರವಾಗಿರುತ್ತದೆ. ವಿಷಮಜ್ವರ, ಮಂದಾಗ್ನಿ, ಕೆಮ್ಮಲು, ಹೃದಯದ ಬೇನೆಗಳಿಗೆ ಗುಣಕಾರಿಯಾಗಿರುತ್ತದೆ. ಇದೊಂದೇ ಹಾಲಿನಿಂದಲೇ ಅನೇಕರಿಗೆ ವಿಶೇಷ ಪ್ರಯೋಜನವಾಗಿದೆ. ಆದರೆ ಆತುರ ಪಡಬಾರದು. ಆತುರವುಳ್ಳವರಿಗೆ ಎಂತಹ ಸಂಜೀವನವೂ ಫಲಕಾರಿಯಾಗುವುದಿಲ್ಲ. ಉಷ್ಣಪ್ರಕೃತಿಯವರು ಹಾಲನ್ನು ಕಾಯಿಸಬೇಕಾಗಿಲ್ಲ. ಆಗಲೇ ಹಿಂಡಿದ ಹಸಿಯ ಹಾಲನ್ನೇ ಉಪಯೋಗಿಸಬಹುದು.

೧೩. ಹಸುವಿನ ಅಥವಾ ಮೇಕೆಯ ಹಾಲನ್ನು ಎರಡು ಲೋಟಗಳಲ್ಲಿ ಹಾಕಿ ಒಂದರಿಂದ ಒಂದಕ್ಕೆ ಮೇಲಿನಿಂದ ಸುರಿಯುತ್ತಿದ್ದರೆ ನೊರೆಯು ಬರುತ್ತದೆ. ಆ ನೊರೆಯನ್ನು ತೆಗೆದು ಬೇರೆ ಪಾತ್ರೆಯಲ್ಲಿ ಸಂಗ್ರಹಿಸಬೇಕು. ಮತ್ತು ನೊರೆ ಬರುವುದು ನಿಲ್ಲುವ ವರೆಗೂ

ಹೀಗೆಯೇ ಮಾಡುತ್ತಿರಬೇಕು. ಆ ನೊರೆಗೆ ಸ್ವಲ್ಪ ಸಕ್ಕರೆಯನ್ನು ಸೇರಿಸಿ ಹಳೆಯ ಜ್ವರದವರಿಗೆ ಮತ್ತು ಅಗ್ನಿಮಾಂದ್ಯ ಅತಿಸಾರದ ರೋಗಿಗಳಿಗೆ ತಿನ್ನಿಸುವುದು ಬಹಳ ಗುಣಕಾರಿಯಾಗಿರುತ್ತದೆ.

೧೪. ಆಗಲೇ ಹಿಂಡಿದ ಹಸುವಿನ ಹಾಲನ್ನು ಒಂದು ಲೋಟಕ್ಕೆ ಹಾಕಿ ಅದರಲ್ಲಿ ನಿಂಬೆಯ ಹಣ್ಣನ್ನು ಹಿಂಡಿ ರೆಪ್ಪೆ ಮುಚ್ಚುವಷ್ಟು ಹೊತ್ತಿನೊಳಗೆ ಕುಡಿದುಬಿಡಬೇಕು. ತಡಮಾಡಿದರೆ ಪ್ರಯೋಜನವಿಲ್ಲ. ಇದು ರಕ್ತ ಮೂಲವ್ಯಾಧಿಯವರಿಗೆ ಕೂಡಲೇ ಗುಣವನ್ನು ಕೊಡತಕ್ಕುದಾಗಿದೆ ಒಂದು ವಾರದೊಳಗಾಗಿಯೇ ರಕ್ತ ಬೀಳುವುದು ಎಷ್ಟೋಜನಗಳಿಗೆ ನಿಂತಿದೆ. ಪರೀಕ್ಷಿಸಲ್ಪಟ್ಟಿದೆ.

ತಾಯಿಯ ಹಾಲು ದೂಷಿತವಾದಾಗ ಮಕ್ಕಳು ಆ ಹಾಲನ್ನು ಅರಗಿಸಿಕೊಳ್ಳಲಾರದೆ ವಾಂತಿಯ ಮೂಲಕ ಅದನ್ನು ಹೊರಗೆ ಹಾಕಿ ಬಿಡುತ್ತವೆ. ಇದರಿಂದ ಮಕ್ಕಳಿಗೆ ಅತಕ್ತತೆಯುಂಟಾಗಿ ಒಡಕಿನಂತಹ, ತೆಳ್ಳಗಿರುವ, ದುರ್ವಾಸನೆಯುಳ್ಳ ಭೇದಿಯಾಗುತ್ತದೆ. ದಿನಕ್ರಮದಿಂದ ಮಕ್ಕಳು ದುರ್ಬಲರಾಗುತ್ತಾರೆ. ಅಂತಹ ಸಮಯ ದಲ್ಲಿ ಈ ಕೆಳಗೆ ಕಾಣಿಸಿರುವ ರೀತಿಯ .ಹಾಲನ್ನು ಕುಡಿಸುವು ದುತ್ತಮ.

೧೫. ಇಪ್ಪತ್ತು ತೊಲ ಬಿಳಿಯ ಸುಣ್ಣಕಲ್ಲನ್ನು ಅಳತೆ ಮೂರು ಸೇರು ನೀರಿನಲ್ಲಿ ಹಾಕಿ ಕರಗಿಸಬೇಕು ಅನಂತರ ಕೋಲಿನಿಂದ ಚೆನ್ನಾಗಿ ತಿರುಗಿಸಿ, ೨೪ ಗಂಟೆಗಳ ಕಾಲ ಕದಲಿಸದೆ ಇಟ್ಟಿದ್ದು, ಮೇಲಿನ ತಿಳಿಯನ್ನು ಮಾತ್ರ ಬಗ್ಗಿಸಿಕೊಂಡು, ಪುನಃ ಒಂದೆರಡು ಗಂಟೆಗಳ ಕಾಲ ಇಟ್ಟಿದ್ದು, ಅನಂತರ ಆ ತಿಳಿಯನ್ನು ಒಂದು ಸ್ವಚ್ಛ ವಾದ ಹಸರು ಬಣ್ಣದ ಸೀಸೆಯಲ್ಲಿ ಹಾಕಿ ಬಿರಟೆನಿಂದ ಭದ್ರಪಡಿ ಸಿಟ್ಟಿರಬೇಕು. ಮಗುವು ಎಷ್ಟು ತಿಂಗಳುಗಳ ವಯಸ್ಸಿನದೋ ಅಷ್ಟು ತೊಟ್ಟುಗಳನ್ನು ಹಸುವಿನ ಶುದ್ಧವಾದ ಹಾಲಿನಲ್ಲಿ ಕೂಡಿಸಿ ಒಂದು ವಾರದ ವರೆಗೆ ಕುಡಿಸುತ್ತಿದ್ದರೆ ಮಗುವಿನ ಆರೋಗ್ಯವು ಕ್ರಮಗೊಳ್ಳುತ್ತದೆ. ಇದನ್ನೇ ಕೆಲವು ದಿನಗಳ ವರೆಗೆ ಕೊಟ್ಟರೆ ಮಗುವು ಪೂರ್ಣಾರೋಗ್ಯವನ್ನು ಹೊಂದುತ್ತದೆ. ಗೃಹಸ್ಥರು ಇದನ್ನು ಮಾಡಿಕೊಂಡು ಮನೆಯಲ್ಲಿ ಇಟ್ಟುಕೊಂಡಿರುವುದು ಉತ್ತಮ.

ಈ ‟ಚೂರ್ಣೋದಕವನ್ನೇ 'Lime water' ಎಂಬ ಹೆಸರಿನಿಂದ ಷಾಪುಗಳಲ್ಲಿ ಮಾರುತ್ತಾರೆ.

ಈ ಮೇಲಿನ ಸುಣ್ಣದ ತಿಳಿಯಲ್ಲಿ ಅದರ ಎರಡರಷ್ಟು ಸಕ್ಕರೆಯನ್ನು ಕೂಡಿಸಿ ಕಲಾಯಿಯ ಪಾತ್ರೆಯಲ್ಲಿ ಹಾಕಿ ಮಂದಾಗ್ನಿಯಿಂದ ಕಾಯಿಸಿ ಒಂದೆಳೆಯ ಪಾಕವನ್ನು ಮಾಡಿ ಶೋಧಿಸಿಕೊಳ್ಳಬೇಕು ಬೇಕಾದರೆ ಸ್ವಲ್ಪ ಕೇಸರಿಯನ್ನೂ ಸ್ವಲ್ಪ ಪಚ್ಚಕರ್ಪೂರವನ್ನೂ ಸುಣ್ಣಗೆ ಅರೆದು ಬಿಸಿಯಾಗಿರುವಾಗಲೇ ಪಾಕದಲ್ಲಿ ಹಾಕಬಹುದು. ಈ ತರಬತ್ತಿಗೇ ತಿನ್ನುವ ಬಣ್ಣವನ್ನು ಹಾಕಿ ಅನೇಕ ಹೆಸರುಗಳಿಂದ ಮಾರುತ್ತಾರೆ. ಇದರಲ್ಲಿನ ೨೦ ತೊಟ್ಟು ಅಥವಾ ಎರಡಾಣೆ ತೂಕದಿಂದ ಎಂಟಾಣೆ ತೂಕದ ವರೆಗೆ ಹಾಲಿನಲ್ಲಿಯಾಗಲಿ ಅಥವಾ ಇದೊಂದನ್ನೇ ಮಕ್ಕಳಿಗೆ ಕೊಟ್ಟರೆ ಹಾಲು ಅರಗದಿರುವುದು; ಹಸರು ಹಳದಿ ಬಣ್ಣದ ನೀರಿನಂತಹ ಭೇದಿ, ಹಾಲು ಕಕ್ಕುವುದು, ಹೊಟ್ಟೆ ನುಲಿಯುವುದು ಅಥವಾ ನೋವು ಇವೇ ಮುಂತಾದ ಹೊಟ್ಟೆಯ ಸಂಬಂಧವಾದ ರೋಗಗಳು ಗುಣವಾಗುತ್ತವೆ. ಇದನ್ನೇ ತಪ್ಪದಂತೆ ಕೆಲವು ಕಾಲ ಕೊಡುತ್ತಿದ್ದರೆ ಮಕ್ಕಳು ರೋಗದಬಲೆಗೆ ಬೀಳದೆ ಬಲಿಷ್ಠರಾಗುವುದರಲ್ಲಿ ಸಂಶಯವೇ ಇಲ್ಲ. ಇದರಿಂದ ಒಣಗಿಕೊಂಡು ಹೋಗುತ್ತಿರುವ ಸಾವಿರಾರು ಮಕ್ಕಳ ಪ್ರಾಣವು ಉಳಿಯುತ್ತದೆ. ಶ್ರೀಮಂತರು ಇದನ್ನು ತಿರಸ್ಕರಿಸಿದರೂ ಬಡವರು ಮಾತ್ರ ಇದನ್ನು ಮಾಡಿಕೊಂಡು ತಮ್ಮ ಮಕ್ಕಳ ಆರೋಗ್ಯವನ್ನು ಕಾಪಾಡಿಕೊಳ್ಳುವುದು ಉತ್ತಮವಾಗಿದೆ. ಪರೀಕ್ಷಿಸಿದರೆ ಗುಣವು ತಾನಾಗಿಯೇ ತಿಳಿಯಬಹುದು.

೧೬. ಅರಶಿನ ಕಾಲುತೊಲ, ಜಾಕಾಯಿ ಅರ್ಧತೊಲ, ತ್ರಿಫಲ (ಅಳಲೆಕಾಯಿ ನೆಲ್ಲಿಚೆಟ್ಟು, ತಾರೇಕಾಯಿ, ಬೀಜ ತೆಗೆದದ್ದು) ಮೂರೂ ಸೇರಿ ಒಂದು ತೊಲ, ಆರೇ ಹೂವು ಒಂದು ತೊಲ, ಹಿಪ್ಪಲಿ ಒಂದು ತೊಲ, ಅತಿಮಧುರ ಒಂದು ತೊಲ, ಕೆಂಪು ಚಂದನ ಹತ್ತುತೊಲ, ಇವುಗಳನ್ನು ಕುಟ್ಟಿ ಬಟ್ಟೆಯಿಂದ ಶೋಧಿಸಿಕೊಳ್ಳಬೇಕು. ಮೇಲೆ ಹೇಳಿರುವ ಸುಣ್ಣದ ನೀರು ಅಳತೆ ಅರ್ಧ ಸೇರಿನಲ್ಲಿ ೪೦ ತೊಲ ಕಲ್ಲುಸಕ್ಕರೆಯನ್ನು ಹಾಕಿ ಮಂದಾಗ್ನಿಯಿಂದ ಕಾಯಿಸಿ ಒಂದೆಳೆ ಬರುವ ಪಾಕವನ್ನು ಮಾಡಿಕೊಂಡು ಅರಶಿನ ಮೊದಲಾದ ಪುಡಿ

